# ಕೊಡಗು ಸಂಗಾತಿ

ಜನವರಿ 1 ರಿಂದ 31, 2002 ಪಾಕ್ಷಿಕ ಪತ್ರಿಕೆ (ಪೆರಾರ್ಡ 17-30 - ಪೊನ್ನಿ 1-17)
೧೩ - ೩೬ ೧ - ೧೭
ನಂ. ೩೫, ಸವಿತಾ ನಿಲಯ, ೧ನೇ ಕ್ರಾಸ್, ೪ನೇ ಬ್ಲಾಕ್, ಜಯಲಕ್ಷ್ಮಿಪುರಂ, ಮೈಸೂರು - ೫೭೦ ೦೧೨
ಸಂಪಾದಕಿ : ಪಟ್ಟಡ ಶೀಲಾಮಣಿ Registered : 10-01-96 TCI Kar. 09592 ಕನ್ನಡ ಮತ್ತು ಅರೆಗನ್ನಡಭಾಷೆಲಿ ಪ್ರಕಟಿತ

Reg. No. KA/SK/MYS-88 ಸಂಪುಟ : 5 ಸಂಚಿಕೆ : 19-20A ಪುಟಗಳು : 24 ಬೆಲೆ ರೂ. : 12-00



ಕಾವೇರಿ ನದಿ ತಟದ ಪ್ರಾಚೀನ 2ನೇ ಈಶ್ವರ ದೇವಾಲಯ



ದುಷ್ಕರ್ಮಿಗಳಿಗೆ ಬಲಿಯಾದ ಗರ್ಭಗುಡಿ ದೇವಾಲಯ

ಲೇಖನ : ಒಳಪುಟದಲ್ಲಿ.

## ಮತೀಯ ದುಷ್ಕರ್ಮಿಗಳಿಂದ ದಾಂದಲೆಗೊಳಗಾದ ಕೊಡಗಿನ ಪಾಲೂರು ಗ್ರಾಮದ ಹರಿಶ್ಚಂದ್ರದ ಈಶ್ವರ ದೇವಾಲಯದ ದಾರುಣ್ಯ ದೃಶ್ಯ 9

ಚಿತ್ರ : ದುಗ್ಗಳ ಸದಾನಂದ ಗೌಡ, ನಾಪೋಕ್ಲು

**ನಾಡ ಜನತೆಗೂ ಸಂಗಾತಿ ಹಿತೈಷಿಗಳಿಗೂ ಹೊಸ ವರುಷದ ಶುಭಾಶಯಗಳು**

## ವಿಶೇಷ ಸೂಚನೆ :

## 1-6-2001 ರಿಂದ ಕೊಡಗು ಸಂಗಾತಿ ತಿಂಗಳಿಗೊಂದೆ :

## ಮುಂದಕ್ಕೂ ಹಾಗೆಯೇ ಮುಂದುವರಿಕೆ

9-4-1997 ರಿಂದ 31-5-2001 ರ ತನಕ ಪ್ರತಿ ತಿಂಗಳು, ತಿಂಗಳಿಗೆ 2 ಪತ್ರಿಕೆಯಂತೆ ಕೊಡಗು ಸಂಗಾತಿಯನ್ನು ಮುದ್ರಿಸಿ ತಪ್ಪದೆ ಎಲ್ಲಾ ಚಂದಾದಾರರಿಗೆ ಕಳುಹಿಸಿದ್ದೇವೆ. ಪತ್ರಿಕೆ ನಡೆಯಿಸುವುದು ಕಠಿಣ ಮತ್ತು ತ್ರಾಸದಾಯಕ ಕೆಲಸವಾಗಿದೆ. ತ್ರಾಸವಾದರು ಪರವಾಗಿಲ್ಲ. ನಾವು ಕಳುಹಿಸುತ್ತಿದ್ದ ಪತ್ರಿಕೆಗೆ ಸಾಕಷ್ಟು ಅಂದರೆ 2.25 ಲಕ್ಷಕ್ಕೂ ಮಿಕ್ಕಿ ಹಣ ಬರಬೇಕಿದೆ. ಸರಾಗವಾಗಿ ಬರದೆ ಇರುವುದರಿಂದ ಹಿರಿಯರ ಮತ್ತು ಅನುಭವಸ್ಥರ ಸಲಹೆ ಮೇರೆ ಅನಿವಾರ್ಯವಾಗಿ ತಿಂಗಳಿಗೊಮ್ಮೆ ಮುದ್ರಿಸುವಂತೆ ಮುಂದಕ್ಕೆ ಸಂಗಾತಿ ಬಳಗ ತೀರ್ಮಾನಿಸಿದೆ. ಹಲವಾರು ಎಡವಟ್ಟುಗಳ ಮಧ್ಯೆಯು ಚಂದಾದಾರರಿಗೆ ನಿರಂತರವಾಗಿ ಕಳುಹಿಸಲು ಹೆಣಗಿದೆ. ಹಾಲಿ ಚಂದದಾರರು ಈ ಹಿಂದಿನಂತೆ ತಾವು ಕಳುಹಿಸಿದ ವಾಯಿದೆಗೆ ಬದ್ಧರಾಗಿರುವಂತೆ ವಿನಂತಿ. ಮುಂದೆ ಆರ್ಥಿಕ ಪರಿಸ್ಥಿತಿ ಸುಧಾರಿಸಿದಲ್ಲೂ ಖಂಡಿತವಾಗಿಯೂ ಹಿಂದಿನಂತೆ ತಿಂಗಳಿಗೆ 2 ಪತ್ರಿಕೆಯಂತೆಯೂ ಸಾಧ್ಯವಾದರೆ ವಾರಪತ್ರಿಕೆಯಾಗಿ ಮಾರ್ಪಡಿಸಲು ಶ್ರಮಿಸುತ್ತೇವೆ. ಆದರೆ ವಾರಪತ್ರಿಕೆ ಕನಸಷ್ಟೆ.

ಈಗ 30-9-2001 ತನಕ ನವೀಕರಣಗೊಳ್ಳದಿರುವ ಕೊಡಗಿನ 400 ಚಂದದಾರರಿಗೆ ಪತ್ರಿಕೆಯನ್ನು ನಿಲ್ಲಿಸಿದ್ದೇವೆ. ಬಾಕಿದಾರರು ದಯವಿಟ್ಟು ಬಾಕಿ ಪಾವತಿಸಿ ಸಂಗಾತಿಯ ಮತ್ತು ಜನಾಂಗದ ಅಭ್ಯುದಯಕ್ಕೆ ಸಹಕರಿಸಬೇಕು. ಸಂಗಾತಿ ನಿಂತರೆ ಅದಕ್ಕೆ ಬಾಕಿಯಿರುವ ಚಂದದಾರರೆ ಕಾರಣಭೂತರಾಗುತ್ತೀರಿ. 1-10-2001ರಿಂದ ಉಳಿಕೆಯಿರುವವರು ಕೂಡಲೇ ಹಣ ಕಳುಹಿಸಿ ನವೀಕರಿಸಿಕೊಳ್ಳುವುದು. ಹಾಗೆಯೇ ಇನ್ನು ಮುಂದಕ್ಕೆ 3 ತಿಂಗಳಿಗೂ ವಾಯಿದೆ ಮೀರಿ. ಜ್ಞಾಪನ ಪತ್ರ ಕಳುಹಿಸಿಯೂ ಉತ್ತರ ಸ್ಪಂದನವಾಗದಿದ್ದಲ್ಲಿ ಅವರಿಗೆ ಖಂಡಿತ ನಿಲ್ಲಿಸಲಾಗುವುದು. ವರ್ಷಕ್ಕೆ (ಊಮೆ ತರಹ) ರೂ. 150/- ರಂತೆ ಮುಂದುವರಿಯುತ್ತದೆ. ಹಾಗೂ ಇನ್ನು ಮುಂದಕ್ಕೆ ತಿಂಗಳಿಗೊಂದೆ ರವಾನಿಸಲು ಸಾಧ್ಯವೆಂದು ತಿಳಿಸಲು ಸಂಗಾತಿಯ ಬಳಗ ವಿಷಾದಿಸುತ್ತದೆ. 30-9-1999, 15-4-2001, 31-12-2001 ಈ ಮೂರು ಹಂತಗಳಲ್ಲಿ ಪತ್ರಿಕೆ ನಿಲ್ಲಿಸಿದ ಚಂದದಾರರು ತಮ್ಮ ಬಾಕಿಯನ್ನು ಸಂಗಾತಿಗೆ ಕಳುಹಿಸಿಕೊಟ್ಟಲ್ಲಿ ಸಂಗಾತಿ ಮೇಲೆದ್ದು ಬರಲು ಸಾಧ್ಯ. ನಾವುಗಳು ಬಾಕಿದಾರರಿಗೆಲ್ಲಾ 3-4 ಜ್ಞಾಪನ ಪತ್ರ ಕಳುಹಿಸಿ ಆಗಿದೆ. ಈ ನಿಮಿತ್ತ ಪತ್ರಿಕೆಯ ಅನಿವಾರ್ಯತೆಯ ಬಗ್ಗೆ ಜನಾಂಗದ ಎಲ್ಲಾ ಸಂಘ ಸಂಸ್ಥೆಗಳು ಎಚ್ಚೆತ್ತು, ಚರ್ಚಿಸಿ, ಚಿಂತಿಸಿ ಕಾರ್ಯಪ್ರವರ್ತರಾಗಬೇಕು. ಸಂಗಾತಿಯು ಹೊಟ್ಟೆಪಾಡಿಗಾಗಿ ಮಾಡುವ ಕೆಲಸವಲ್ಲ. ಜನಾಂಗದ ಹಿತವನ್ನು ಬಯಸಿ ನಾವು ತಂದಿದ್ದೇವೆ ಹೊರತು ಬೇರೆ ಉದ್ದೇಶಗಳಿಂದಲ್ಲ. ಪತ್ರಿಕೆ ಕಣ್ಮುಚ್ಚಿದರೆ 70%ಕ್ಕಿಂತ ಲೂ ಹೆಚ್ಚಿನ ಬಂಧುಗಳು, 90%ಕ್ಕಿಂತಲೂ ಹೆಚ್ಚು ಸಂಘ ಸಂಸ್ಥೆಗಳೆ ಕಾರಣರಾಗಿದ್ದೀರಿ ಎಂದು ಈ ಮೂಲಕ ವಿಷಾದದಿಂದ ನುಡಿಯಬೇಕಾಗುತ್ತದೆ. ಜನಾಂಗದ ಕೆಳಸ್ತರದ ಬಂಧುಗಳೇ ಮುಂದೆ ಬನ್ನಿ. ನಮ್ಮ ಭಾಷೆ ಮತ್ತು ಸಂಸ್ಕೃತಿಯನ್ನು ಮುಂದಿನ ಪೀಳಿಗೆಗೆ ರವಾನಿಸಲು ನೀವಾದರು ಮುಂದೆ ಬನ್ನಿ. ಈ ಪತ್ರಿಕೆಯನ್ನು ಉಳಿಸೋಣಾ. ನಮ್ಮ ಕೈ ಬಲಪಡಿಸಿ. ನಿಮ್ಮ ಕೈ ಜೋಡಿಸುತ್ತೇವೆ.

ಪಟ್ಟಡ ಪ್ರಭಾಕರ, ಗೌರವ ಸಂಪಾದಕರು ಮತ್ತು ಬಳಗ.

---

## ಕೊಡಗು ಸಂಗಾತಿಯ ಓದುಗರ ಬಳಗಕ್ಕೆ

## ಗೌಡ ಮತ್ತು ಬಂಧುಮಿತ್ರರ ಕ್ಷೇಮಾಭಿವೃದ್ಧಿ ಸಂಘ, ಬೆಂಗಳೂರು

## 2002ನೇ ಹೊಸ ವರ್ಷದ ಹಾರ್ದಿಕ ಶುಭಾಶಯಗಳು

ದಿನಾಂಕ 1-9-1998 ರಿಂದ ಅಸ್ತಿತ್ವಕ್ಕೆ ಬಂದಿರುವ ಮೇಲಿನ ಸಂಘಕ್ಕೆ ಈಗಾಗಲೇ ಬೆಂಗಳೂರಿನಲ್ಲಿ ನೆಲೆಸಿರುವ ಅರೆಭಾಷೆ ಗೌಡ ಬಾಂಧವರು ಸದಸ್ಯರಾಗಿ ಸಂಘದ ಕ್ಷೇಮಾಭಿವೃದ್ಧ ಇಯೋಜನೆಯ ಪ್ರಯೋಜನ ಪೆಡೆದುಕೊಂಡಿದ್ದು, ಸಂಘವನ್ನು ಮತ್ತಷ್ಟು ಅಭಿವೃದ್ಧಿಗೊಳಿಸಲು ಆಶಯ ಹೊಂದಲಾಗಿದೆ. ಮಾಸಿಕ ಚಂದಾ ಹಣ ರೂ. 100-00 ಅಥವಾ ಒಮ್ಮೆಲೇ ರೂ. 1200-00 ಸಂದಾಯ ಮಾಡಿಕೊಡಬಹುದಾಗಿದೆ. ಸದರಿ ಮೊತ್ತವು ಷೇರು ಧನದ ರೂಪದಲ್ಲಿ ಸಂಘದಲ್ಲಿ ಜಮಾ ಆಗುವುದು. ಸಂಘುತ ಸದಸ್ಯರಾಗುವುದರೊಂದಿಗೆ, ಸಹಕಾರ, ಮಾರ್ಗದರ್ಶನ ನೀಡಿ ಕೊಳ್ಳಲು ವಿನಂತಿಸಲಾಗಿದೆ. ವಿವರಗಳಿಗೆ ಈ ಕೆಳಕಂಡ ಪದಾಧಿಕಾರಿಗಳನ್ನು ಸಂಪರ್ಕಿಸಬಹುದು.

1. ಶ್ರೀ ಎಂ. ಜಿ. ಉತ್ತಪ್ಪ, ವಕೀಲರು, ಮತ್ತು ನೋಟರಿ, ಅಧ್ಯಕ್ಷರು ☎ : 5245519
2. ಶ್ರೀ ಯು. ಎಲ್. ಸೋಮಪ್ಪ, ವಕೀಲರು ಮತ್ತು ನೋಟರಿ , ಕಾರ್ಯದರ್ಶಿ
   ☎ : 6671721, 6750108, 9844020417
3. ಜೆ. ಬಿ. ಧನಂಜಯ, ಖಜಾಂಚಿ : 3308017, 2864331, 28612767, 28654441



# 2002, ಜನವರಿ 1 ರಿಂದ 31ರ ತನಕ

**ಒಳನೋಟ**




| | |
|---|---|
| ಚಂದಾ ಕಳುಹಿಸುವ ಮತ್ತು ಜಾಹೀರಾತು ಪ್ರಸಾರ ಕಛೇರಿ | **ಕೊಡಗು ಸಂಗಾತಿ**, 35,"ಸವಿತಾ ನಿಲಯ", 1ನೇ ಕ್ರಾಸ್, 4ನೇ ಬ್ಲಾಕ್, ಜಯಲಕ್ಷ್ಮಿಪುರಂ, ಮೈಸೂರು - 12. **ಫೋನ್ : 0821/516771** |
| ಮಡಿಕೇರಿಯಲ್ಲಿ ಸಂಗಾತಿ ಕಛೇರಿ ಚಿಹ್ನೆ, ಹಸೆಮಣೆ / ಶುಭಾಶಯ ಕಾರ್ಡ್ಸ್ / ಕ್ಯಾಸೆಟ್ ಕೀ ಚೈನ್ ಲಭ್ಯ | ಬೈತಡ್ಕ ಜಾನಕಿ ಬೆಳ್ಯಪ್ಪ,,ನಂ. 21-16ಎಲ್. ಐ. ಸಿ. ಹತ್ತಿರ, ರೇಸ್ ಕೋರ್ಸ್ ರಸ್ತೆ, ಮಡಿಕೇರಿ, **ಫೋನ್ : 08272/28047** |
| | ಚೆರಿಯಮನೆ ರಮೇಶ್, C/o ಪಾಂಡ್ಯನ್ ಕ್ಯಾಸೆಟ್ ಅಂಗಡಿ, ಖಾಸಗಿ ಬಸ್ ನಿಲ್ದಾಣ, ಮಡಿಕೇರಿ, ಫೋನ್ : 08272/29620 |
| ವಿರಾಜಪೇಟೆ | ಬಾರಿಕೆರ ಮನೋಜ್‌ಕುಮಾರ್, ಇಗ್ಗುತ್ತಪ್ಪ ಕೋಲ್ಡ್ ಸ್ಟೋರ್, ಖಾಸಗಿ ಬಸ್ ನಿಲ್ದಾಣ, ವೀರಾಜಪೇಟೆ ಫೋನ್ : 08274/56591 |
| ಕುಶಾಲ ನಗರ | ಕುಂಞಗೌಡನ ಸೋಮಣ್ಣ, ಮಯೂರ ಕೋಲ್ಡ್ ಸ್ಟೋರೆಜ್, ಮುಖ್ಯ ರಸ್ತೆ, ಕುಶಾಲನಗರ - 571 234 ಫೋನ್ : 08276/73370 |
| ಬೆಂಗಳೂರು ಮಹಾನಗರ | ಕಲ್ಲುಮುಟ್ಲು ಬಸಪ್ಪ, ನಂ. 37, 3ನೇ ಮೇನ್, ನಂಜಪ್ಪ ಬ್ಲಾಕ್, ಕೆಂಪೇಗೌಡ ನಗರ, ಬೆಂಗಳೂರು - 19, ಫೋನ್ : 080/6500946 |

ಚಂದಾ ವಿವರ : ಜೀವಾವಧಿ ಸದಸ್ಯತನ - 2000 ರೂ., ಬಿಡಿ ಪ್ರತಿ - 12ರೂ.

ವಾರ್ಷಿಕ ಚಂದಾ - 150 ರೂ. (ಅಂಚೆ ವೆಚ್ಚ ಸೇರಿ), ಒಲೆಗೊಂದರಂತೆ ಸದಸ್ಯರಾಗಿ ಕೊಂಡು ಓದಿ.

# ಸಂಪಾದಕೀಯ :

## ಮಾ(ದಾ)ನವರ ದ್ವೇಷಕ್ಕೆ ಸತ್ತದ್ದು ದೇವರು! ಅಶಾಂತಿ ಕೆರಳಿಸಿದ ಪಾಲೂರು ಘಟನೆ

"ದೇವನೊಬ್ಬ ನಾಮ ಹಲವು" ಎನ್ನುವ ನಾಣ್ನುಡಿ ಎಲ್ಲರಿಗೂ ತಿಳಿದಿರುವಂತಹುದೇ. ದೇವರಿರುವುದು ಆತ್ಮ ಶಾಂತಿಗಾಗಿ. ಜೀವನದಲ್ಲಿ ಸೋತು ಸುಣ್ಣವಾದಾಗ ದೇವರ ಸ್ತುತಿ ನೋವನ್ನು ಮರೆಸಿ ಮನಸ್ಸಿಗೆ ನೆಮ್ಮದಿ ನೀಡಬಹುದು. ಆದರೆ ಕೊಡಗಿನಲ್ಲಿ ಡಿಸೆಂಬರ್ 6 ರಂದು ನಡೆದದ್ದೇನು? ಯಾವ ದೇವರು ಮನಸ್ಸಿನ ನೆಮ್ಮದಿಗೆ ಕಾರಣನಾಗಿದ್ದನೋ, ಯಾವ ದೇವರು ನಾಡಿನ ಶಾಂತಿಗೆ ಕಾರಣಭೂತನಾಗಿದ್ದನೋ ಆ ದೇವರ ದೇವಾಲಯವೇ ದುಷ್ಕರ್ಮಿಗಳಿಂದ ಧ್ವಂಸ. ಪಾಲೂರು ಹರಿಶ್ಚಂದ್ರ ಶಿವ ದೇವಾಲಯ ಹೃದಯ ಹೀನರ ಕಠೋರ ದಾಳಿಗೆ ತುತ್ತಾಯಿತು. ನಂತರ ಪ್ರಾರಂಭವಾಯ್ತು ಶಾಂತಿಯುತ ಕೊಡಗಿನಲ್ಲಿ ದ್ವೇಷಕ್ಕೆ ದ್ವೇಷ, ಮುಯ್ಯಿಗೆ ಮುಯ್ಯಿ ಕಾರ್ಯಕ್ರಮ. ಪರಿಣಾಮವಾಗಿ ಯಾವ ತಪ್ಪೂ ಮಾಡದ ಅಮಾಯಕರಿಗೆ ಸೇರಿದ ಆಸ್ತಿ ಪಾಸ್ತಿಗಳ ನಷ್ಟ.

2001ರ ಡಿಸೆಂಬರ್ 2 ನೇ ವಾರದಲ್ಲಿ ಕೊಡಗು ತನ್ನ ಭವ್ಯ ಸಂಸ್ಕೃತಿ, ಸಂಪ್ರದಾಯಗಳನ್ನು ಮರೆಯಲಿಲ್ಲ. ಏಕೆ ಹೀಗಾಯಿತು? ಕೊಡಗಿನಲ್ಲಿ ಪರಸ್ಪರ ಅನ್ಯೋನ್ಯತೆಯಿಂದಿದ್ದ ವಿವಿಧ ಧರ್ಮಗಳ ಜನ ಯಾಕೆ ಪರಸ್ಪರ ಕಾದಾಡಿದರು? ಇದನ್ನು ಪ್ರತಿಯೊಬ್ಬರೂ ಇಂದು ವಿವೇಚಿಸಬೇಕಾದ ಅನಿವಾರ್ಯತೆಯಿದೆ.

ಸರಕಾರ ಅಲ್ಪ ಸಂಖ್ಯಾತರಿಗೆ ಮಿತಿ ಮೀರಿದ ಸೌಲಭ್ಯಗಳನ್ನು ಒದಗಿಸುತ್ತಿದೆ. ಶಾಂತಿಪ್ರಿಯ, ಅತಿಥಿ ಸತ್ಕಾರದ ಗುಣಗಳನ್ನು ಮೈಗೂಡಿಸಿಕೊಂಡಿರುವ ಕೊಡಗಿನ ಜನತೆ ಸಹ ಅವರಿಗೆ ಯಾವ ತೊಂದರೆಯನ್ನು ಮಾಡಲಾರರು. ಹೀಗಿರುವಾಗ ಅಲ್ಪ ಸಂಖ್ಯಾತರಲ್ಲಿ ಕೆಲವರು ತಮಗಿರುವ ಅವಕಾಶಗಳನ್ನು ದುರುಪಯೋಗ ಪಡಿಸಿ ಕೊಂಡು ದೇವಾಲಯ ಭಗ್ನಗೊಳಿಸಿದ್ದು ಹಾಗೂ ತಮಗೆ ರಕ್ಷಣೆ ನೀಡಬಂದ ಪೊಲೀಸರ ಮೇಲೆ ಧಾಳಿ ನಡೆಸಿದ್ದು ಖಂಡನಾರ್ಹ. ಇದನ್ನೆ ನೆಪ ಮಾಡಿಕೊಂಡು, ಉದ್ರೇಕಗೊಂಡು ಹಲವರ ಮನೆ ಮೇಲೆ ಧಾಳಿ ನಡೆಸಿದ್ದು ಸಹ ಮೆಚ್ಚತಕ್ಕದಲ್ಲ. ಏಕೆಂದರೆ ಇಲ್ಲಿ ಶಿಕ್ಷೆಗೊಳಗಾಗುವವರು ತೀರಾ ಅಮಾಯಕರೆ ಹೊರತು ತಪ್ಪು ಮಾಡಿದವರಲ್ಲ. ಈ ಎಲ್ಲಾ ಘಟನೆಗಳಿಂದ ಸುಮಾರು ಒಂದು ವಾರಗಳ ಕಾಲ ಜನ ಜೀವನ ಜಿಲ್ಲೆಯಲ್ಲಿ ಅಸ್ತವ್ಯಸ್ತಗೊಂಡು ಆತಂಕದ ನಡುವೆ ಜನ ಬದುಕುವಂತಾದುದು ನಿಜಕ್ಕೂ ಶೋಚನಿಯ.

ಈ ಎಲ್ಲಾ ಕಹಿ ಘಟನೆಗಳ ಬಳಿಕ, ಈ ಎಲ್ಲಾ ಘಟನೆಗಳನ್ನು ನಿಭಾಯಿಸುವಲ್ಲಿ ಸಂಪೂರ್ಣ ವಿಫಲಗೊಂಡ ಪೊಲೀಸ್ ಇಲಾಖೆ ಈಗ ಯಾವ ತಪ್ಪು ಮಾಡದ ಸ್ಥಳೀಯ ಅಮಾಯಕರನ್ನು ಬಂಧಿಸಿ ಎಳೆದೊಯ್ಯುತ್ತಿರುವುದು ಇನ್ನಷ್ಟು ಖಂಡನೀಯ. ಸಮಾನಾಂತರ ಜೀವನವನ್ನೂ ನಡೆಸಲು ಸರ್ವರಿಗೂ ಸಮಾನವಾದ ಏಕ ರೀತಿಯ ಕಾಯ್ದೆಯನ್ನು ಸರಕಾರ ತರುವುದೊಳಿತು.

---

### ಅರೆಭಾಷೆಯ ಸರಳ ಶಬ್ಧಗಳು

ಚಾಮೆಪ್ಪ - ಮುತ್ತಾತ, ಮುತ್ತಜ್ಜ
ಚಾಂಪ - ತಾತಾ, ಅಜ್ಜ
ಅಜ್ಜ - ಅಜ್ಜ
ಅಪ್ಪ - ತಂದೆ
ಮಂಞ - ಮಗ, ಹೈದ
ಪಿಳ್ಳಿ - ಮೊಮ್ಮಗ
ಮೊರಿ ಪಿಳ್ಳಿ - ಮರಿ ಮಗ
ಚಾಮೆವ್ವ - ಮುತ್ತಜ್ಜಿ
ತಾಯಿ - ಅಜ್ಜಿ
ಅಜ್ಜಿ - ಅಜ್ಜಿ
ಅವ್ವ - ಅಮ್ಮ
ಮಗ್ಳು - ಮಗಳು, ಗೂಡೆ
ಪಿಳ್ಳಿ - ಮೊಮ್ಮಗಳು
ಮೊರಿ ಪಿಳ್ಳಿ - ಮರಿ ಮಗಳು
ಗೂಡೆ - ಹುಡುಗಿ
ಹೈದ - ಹುಡುಗಿ
ಎದ್ರ್ಗ್ನಡೆ - ಇದಿರು
ಕೆಮಿ - ಕಿವಿ
ಮೆಡಿ - ಮಿಡಿ
ತೊರ್ರು - ತುರಿಸು
ಹೊಡಿ - ಹುಡಿ
ಬಂಞ - ಭಂಗ
ಕಸ್ಟ - ಕಷ್ಟ
ಕೊಂಞ - ತೊದಲ್ನುಡಿ
ಇಜು - ನಜ್ಜು ಗುಜ್ಜು
ಬೆದುರು - ಬಿದಿರು
ನೆಳ - ನೊಣ
ಹೋತು - ಹೋಯಿತು
ಅದ್ ಎಂತದ್ - ಅದು ಏನು
ಎಂತಕೆ - ಯಾವುದಕ್ಕೆ
ಹಂಗೆ - ಹಾಗೆ
ಬೆರ್ಸಿಕಂಡ್ - ಓಡಿಸಿಕ್ಕೊಂಡು
ಕಿಲೆಂಬಿ - ಕಿಲುಬು
ಕವುಂಚು - ಕವುಚು
ಉಣುಂಗು - ಉಣ್ಣೆ
ಮೀಸು - ಮೀಯಿಸು
ಮೆಲ್ಲಂಗೆ - ಮೆಲ್ಲಗೆ
ಬೆಚ್ಚಂಗೆ - ಬಿಸಿಯಾಗಿ
ತೆಳ್ಳಂಗೆ - ತೆಳುವಾಗಿ
ಕಸಂಡ್ - ವಾಸನೆ, ಹಾಳಾದ್ದು
ಪರ್‌ಂಚುದು - ವಟ ವಟ ಹೇಳ್ದು
ಹೇಳಿರೆ - ಹೇಳಿದರೆ
ಮಾಡಿರೆ - ಮಾಡಿದರೆ
ಕಾಂಬಲೆ - ಕಾಣುವುದಿಲ್ಲ.
ಅಂಟ್ಸು - ಅಂಟಿಸುವುದು
ಆಡ್ಸು - ಆಡಿಸುವುದು.
ಕಚ್ಚುಸು - ಕಚ್ಚಿಸುವುದು
ಕೊಡ್ಸು - ಕೊಡಿ ಸುವುದು
ನೋಡ್ಸು - ನೋಡಿಸುವುದು
ಕೊಡ್ಸಿ, ಕೊಟ್ಟನೆ - ತೆಗೆಯಿಸಿ ಕೊಡುವೇನು
ಪಾರ್ಲಿ - ಹಲಗೆಯಲ್ಲಿ
ದಾರಂದ - ಬಾಗಿಲಿನ ಮೇಲ್ಬಾಗದಲ್ಲಿರು ಚಿಕ್ಕ ಪೆಟ್ಟಿಗೆಯಂತ ಜಾಗ
ಅಮ್ಮ - ಗೊತ್ತಿಲ್ಲ
ಉಮ್ಮ - ನಂಗೊತ್ತಿಲ್ಲ
ವಳ್ಳ- ಒಳ್ಳೆಯ
ಮಗ್ಗಿ- ತಿರುಗಿ, ತಿರ್ಗಿ, ವಾಪಾಸು
ಪೀಂಕ್ಸ್- ಕಳಚು
ದಾವ್- ಬಾಯಾರಿಕೆ

20ನೇ ಪುಟಕ್ಕೆ

---

ವಿಶ್ವದಲ್ಲಿಯೇ ಅತ್ಯುನ್ನತ ಶಿಖರ -ಮೌಂಟ್ ಎವರೆಸ್ಟ್ 8,848 ಮೀ.

# ಪಾಲೂರು ಹರಿಶ್ಚಂದ್ರ ದೇವಾಲಯದಲ್ಲಿ ದುಷ್ಕರ್ಮಿಗಳಿಂದ ದಾಂಧಲೆ

**ಕಳೆದ ತಿಂಗಳು ಡಿಸಂಬರ್ 6 ರಂದು**

I ಕೊಡಗಿನಲ್ಲಿ ವ್ಯಾಪಕ ಪ್ರತಿಭಟನೆ
II ಕೊಡಗಿನ ಎಲ್ಲಡೆ ರಸ್ತೆ ತಡೆ
III ಜಿಲ್ಲೆಯಲ್ಲಿ ಬಿಗು ವಾತಾವರಣ
iV ನಾಲ್ಕು ಶಂಕಿತರು ಪೊಲೀಸ್ ವಶಕ್ಕೆ
V ಕೊಡಗು ಜಿಲ್ಲೆ ಪ್ರಕ್ಷುಬ್ಧ ರಾತ್ರಿ ಕರ್ಫ್ಯೂ ಜಾರಿ
VI ಜಿಲ್ಲೆಯ ಅಲ್ಲಲ್ಲಿ ಗಲಭೆ ದೊಂಬಿ, ಆಸ್ತಿ ಪಾಸ್ತಿ ನಷ್ಟ.

ಕೊಡಗಿನ ಕುಲದೇವತೆ ಕಾವೇರಿಯು ತೀರ್ಥರೂಪಿಣಿಯಾಗಿ ಹರಿದ ಅಗಸ್ತ್ಯ ಋಷಿ ತಪಸ್ಸು ನಡೆಸಿದಲ್ಲದೆ ಕಾವೇರಿ ತಟದಲ್ಲಿ ದ್ವಿತೀಯ ಬಾರಿಗೆ ಪ್ರತಿಪಾದಿಸಿದ ಈಶ್ವರ ದೇಗುಲ ಇದೆಂಬ ಪ್ರತೀತಿ ಹೊಂದಿದ ತುಲಾ ಸಂಕ್ರಮಣ ಜಾತ್ರೆಯ ಮರು ದಿವಸ ಕೊಡಗಿನ ಜನತೆ ಹರಿಶ್ಚಂದ್ರದಲ್ಲಿ ಶಿವನಿಗೆ ಪೂಜೆ ಸಲ್ಲಿಸಿ ಕಾವೇರಿಯಲ್ಲಿ ಮಿಂದು, ಪಿತೃಕಾರ್ಯ ನಡೆಸುವ ಐತಿಹಾಸಿಕ ಹಿನ್ನಲೆ ಸನ್ನಿಧಿಯಾಗಿರುವ ಅಲ್ಲದೆ ಪಾಲೂರು ಶ್ರೀ ಮಹಾಲಿಂಗೇಶ್ವರ ಉತ್ಸವದ ಸಂದರ್ಭ ದೇಗುಲದಿಂದ ತೆರಳಿ ಕಾವೇರಿಯಲ್ಲಿ ಮಿಂದು ಶ್ರೀ ಹರಿಶ್ಚಂದ್ರನಿಗೆ ಮೂರು ಪ್ರದಕ್ಷಿಣೆಯಿತ್ತು ಹಿಂತಿರುಗಿದ ಬಳಿಕವಷ್ಟೆ ಮಹಾಲಿಂಗೇಶ್ವರವಾರ್ಷಿ ಕೋತ್ಸವ ನೆರವೇರುವಂತಹ ಕೊಡಗು ದೇವಾಲಯನಿಧಿ ವ್ಯವಸ್ಥಾಪಕ ಸಮಿತಿಯ ಅಧೀನ ದಲ್ಲಿರುವ ಪಾಲೂರಿನ ಹರಿಶ್ಚಂದ್ರ ಶಿವ ದೇವಾಲಯವನ್ನು ಡಿಸಂಬರ್ 6 ರಂದು ರಾತ್ರಿ ವೇಳೆ ದುಷ್ಕರ್ಮಿಗಳು ಧ್ವಂಸ (ಭಗ್ನ) ಮಾಡಿರುವ ಬಗ್ಗೆ ವರದಿಯಾಗಿದ್ದು, ನಿಜಕ್ಕೂ ಖಂಡನೀಯವಾಗಿದೆ.

ಭಾಗಮಂಡಲದಿಂದ 28 ಕಿ. ಮೀ. ಹಾಗೂ ಮಡಿಕೇರಿಯಿಂದ 20 ಕಿ. ಮೀ ಅಂತರದಲ್ಲಿರುವ ಪಾಲೂರು ಹರಿಶ್ಚಂದ್ರದ ಶಿವ ದೇವಾಲಯಕ್ಕೆ ಯಾರೋ ದುಷ್ಕರ್ಮಿಗಳು ನುಗ್ಗಿ ದಾಂಧಲೆ ನಡೆಸುವುದರೊಂದಿಗೆ ದೇಗುಲದ ಗರ್ಭಗುಡಿ ಪೌಳಿಯ ಮೇಲ್ಛಾವಣಿಯ ಮರ ಮುಟ್ಟುಗಳನ್ನು ಪುಡಿಗುಟ್ಟಿ ಬಾಗಿಲು ಮುರಿದು ಒಳನುಗ್ಗಿ ಶಿವಲಿಂಗವನ್ನು ವಿರೂಪ ಮಲೀನ (ಕಕ್ಕಸ್ಸು) ಗೊಳಿಸಿದ್ದು ಗರ್ಭಗುಡಿಯ ಮೆಟ್ಟಿಲನ್ನು ಮುರಿದು ಗರ್ಭಗುಡಿಯ ದ್ವಾರಕ್ಕೆ ಸಗಣಿ ಮಲ ಮೂತ್ರ ಮಾಡಿ ವಿರೂಪ ಗೊಳಿಸಿದ್ದಾರೆ.

ದೇವಾಲಯದ ಹಿನ್ನಲೆ ಈ ರೀತಿ ಇದೆ ಪಾಲೂರಿನ ಶ್ರೀ ಹರಿಶ್ಚಂದ್ರ ಶಿವ ದೇವಾಲಯ ಕಾವೇರಿ ತೀರದ ದ್ವಿತೀಯ ಶಿವ ದೇವಾಲಯವಾಗಿದ್ದು ಅಗಸ್ತ್ಯ ಮಹರ್ಷಿ ತಪವಗೈದು ಆ ಬಳಿಕ ಪ್ರತಿಷ್ಠಾಪಿಸಿದರೆಂದು ಆ ಕಾರಣಕ್ಕಾಗಿಯೇ ನದಿ ರೂಪಿಣಿ ಕಾವೇರಿಯು ಸಾಕಷ್ಟು ಅಂತರದಲ್ಲಿ ಸುತ್ತುವರಿದು ಹರಿಶ್ಚಂದ್ರ ಶಿವ ದೇಗುಲದ ಅಂಚಿನಲ್ಲಿ ಹರಿಯುತ್ತಿರುವುದು ಇಲ್ಲಿ ಗೋಚರಿಸುತ್ತಿದೆ. ಅಗಸ್ತ್ಯರು ತಪವಗೈದರೆನ್ನಲಾದ ಯಾಗ ಮಂಟಪ ಇಂದಿಗೂ ಇಲ್ಲಿ ಕಾಣಬಹುದಾಗಿದೆ. ಈ ದೇವಾಲಯ ಕೊಡಗು ಜಿಲ್ಲೆಯ ತನ್ನದೇ ಆದ ಐತಿಹಾಸಿದ ಹಿನ್ನಲೆ ಪರಂಪರೆಯಿಂದ ಕೂಡಿದ ವೈಶಿಷ್ಟ್ಯ ಇತಿಹಾಸವಿದೆ ಈ ಹರಿಶ್ಚಂದ್ರ ದೇವಾಲಯಕ್ಕೆ.

ದೇವಾಲಯಕ್ಕೆ ಜಖಂ ಉಂಟು ಮಾಡಿದ್ದ ಬಗ್ಗೆ ಆ ವ್ಯಾಪ್ತಿಗೆ ಒಳಪಟ್ಟ ನಾಪೊಕ್ಲು ಪೊಲೀಸ್ ಠಾಣೆಗೆ ದೂರು ನೀಡಲಾಗಿತ್ತಾದರೂ ಪೊಲೀಸರು ಯಾವುದೇ ಕ್ರಮ ಕೈಗೊಂಡಿಲ್ಲ ಎಂಬುದಕ್ಕೆ ಪ್ರೀತಿ ವಿಶ್ವಾಸಕ್ಕೆ ಹೆಸರು ಮಾಡಿದ ಕೊಡಗು ಜಿಲ್ಲೆ ಶಾಂತಿ ಪ್ರಿಯ ಸಹೃದಯ ನಾಗರೀಕರು ರಾಜಕೀಯ ಪಕ್ಷದ ಪ್ರಮುಖರು ದೇವಾಲಯಕ್ಕೆ ತೆರಳಿ ಕೃತ್ಯವೆಸಗಿದ ದುಷ್ಕರ್ಮಿಗಳನ್ನು ಬಂಧಿಸದ ಹೊರತು ಪ್ರತಿಭಟನೆಯಿಂದ ಹಿಂದೆ ಸರಿಯುವುದಿಲ್ಲ ಎನ್ನುವ ಧೃಡ ನಿರ್ಧಾರದೊಂದಿಗೆ ದಿನಾಂಕ 10 ರಂದು ರವಿಯ ತಾಪ ನೆತ್ತಿಗೆರುವ ಮುನ್ನ ನಾಪೊಕ್ಲು ಹಾಗೂ ಬೆಟ್ಟಗೇರಿ ತಿರುವಿಲ್ಲಿ ಏಕ ಕಾಲಕ್ಕೆ ರಸ್ತೆ ತಡೆ ಆರಂಭಿಸಿದ ಪ್ರತಿಭಟನಾಕಾರರು ದುಷ್ಕರ್ಮಿಗಳನ್ನು ಬಂಧಿಸಿ ತಮ್ಮೆದುರು ಹಾಜರು ಪಡಿಸದ ಹೊರತು ಯಾವುದೇ ವಾಹನ ಸಂಚಾರಕ್ಕೆ ಅವಕಾಶ ಕೊಡುವುದಿಲ್ಲವೆಂದು ಪಟ್ಟು ಹಿಡಿದ ಪ್ರತಿಭಟನಕಾರರು ಕೆಲ ಗಂಟೆಗಳಲ್ಲಿ ಬೆಟ್ಟಗೇರಿಯ ಅಂಗಡಿಯನ್ನು ಭಸ್ಮಗೊಳಿಸಿದರು. ಅದೇ ರೀತಿ, ಕೊಡಗಿನ ಎಲ್ಲೆಡೆ ಪ್ರಾರ್ಥನಾ ಮಂದಿರ ಜಖಂ ಗೊಳಿಸಿದಲ್ಲದೆ ಹೊಟೇಲ್ ಕೆಲವೊಂದು ಮನೆ ಪ್ರತಿಭಟನಕಾರರ ಬೆಂಕಿಗೆ ಆಹುತಿಯಾಯಿತು. 4 ದಿನಗಳ ಕಾಲ ಶಾಲಾ ಕಾಲೇಜು ಗಳಿಗೆ ರಜೆ, 144 ಅನ್ವಯ ಕೊಡಗಿನಲ್ಲಿ ನಿಷೇದಾಜ್ಞೆಯನ್ನು ವಿಸ್ತರಿಸಿ ಪರಿಸ್ಥಿತಿ ಕೆಲದಿನಗಳಲ್ಲಿ ಸರಿಗೊಂಡಿರುತ್ತದೆ.

ಬರಹ : ಕುಯ್ಯಮುಡಿ ಸುನೀಲ್, ಸಣ್ಣಪುಲಿಕೋಟು

---

## ತಡಿನ ಆಸೆ ಪಡ್‌ಬ್ಯಾಡ

ನಮ್ಮ ನಮ್ಮ 'ತಡಿ' ತ್ತೇಳುವ ಶರೀರದ ಮೇಲೆ ವಿಶ್ವಾಸ ಮಡ್ಗಿಕ್ಕಾಗದ್ ಅದ್ ಕೇಡ್‌ಗೆ ದಾರಿ. ಅದ್ರ ಎಷ್ಟಕ್ಕೆ ಬೇಕೋ ಅಷ್ಟಕ್ಕೆ ಮಡ್ಗಿ ಕಂಬಕ್ಕು. ತಡಿಗೆ ಎಂತದೆಲ್ಲಾ ಬೇಕ್, ಒಂದಾ- ಎರಡಾ? ನಮ್ಮ ತಡಿ ಒಂದ್ ಮಣ್ಣ್‌ನ ಕುಡ್ಕೆ. ನಮ್ಮ ತಡೀನೇ ಸರ್ವಸ್ವತ್ತೇಳಿಕಂಡ್ ನಂಬುದು ಅಪಾಯಕಾರಿ. ತಡೀ ಆರೋಗ್ಯಲೇ ಮಾಡ್ಕೊಂಬಕು. ನಾವ್ ನಮ್ಮ ಕಾರ್‌ನ ತೊಳ್ಕಂಡ್ ಅದ್ಕೆ ನೀರ್, ಆಯಿಲ್ ಹಾಕಂಡ್, ಲಾಯಕ್ಕಲಿ ಮಡ್ಗಿಕಂಬೊವುಕೆ ನಮ್ಮ ಪ್ರಯಾಣಕ್ಕೆ ಅನುಕೂಲ ಆಗಲಿತ. ಅದರ ಒಡ್ಸದೆ ಪೂಜೆಗೆ ಮಡ್ಗುದಲ್ಲ. ಹಂಗೇ ನಮ್ಮ ನಮ್ಮ ತಡೀನ ಒಳ್ಳೆ ಬಟ್ಟೆ ಬರೆ ಹಾಕಂಡ್, ಪೌಡರ್ ಸೆಂಟ್ ಹಾಕಂಡ್, ಮಡ್ಗಿ ಕಂಡವೆ ಯಾಕೆ? ಪರೋಪಕಾರಕ್ಕಾಗಿ ಅಲಂಕಾರಕ್ಕಾಗಿ ಅಲ್ಲ. ಪೂಜೆ ಮಾಡಿಕಲ್ಲಾ, ಮಣ್ಣಿನ ಕುಡಿಕೆ ಅಲಂಕಾರ ಮಾಡಿಕಲ್ಲ. ಮಣ್ಣಿನ ಕುಡ್ಕೆಗೆ ಅಲಂಕಾರ ಮಾಡಿ ಏನ್ ಪ್ರಯೋಜನ. ಆದರಂದ ಎಂತಾರ್ ಕೆಲ್ಸ ಅದ್ಯೇನೋ? ಸಮಾಜ ಕಾರ್ಯ ಮಾಡದ ದೇಹಕ್ಕೆ ಅಲಂಕಾರ ಮಾಡಿ ಏನ್ ಪ್ರಯೋಜನ?

ಕೊಡವ ಭಾಷೇಲಿ : ಚೇಂದ್ರಿಮಾಡ ಜೆ. ಮುತ್ತಪ್ಪ
ಅರೆ ಗನ್ನಡ ಭಾಷೆಗೆ : ಪಟ್ಟಡ ಪ್ರಭಾಕರ.

---

ವಿಶ್ವದಲ್ಲಿ ಎತ್ತರದ ಮನುಷ್ಯ - ಪಾಕಿಸ್ತಾನದ ಆಲಮುಚನ್ನಾ – 8'6"

# ಪಾಲೂರು ಶ್ರೀ ಹರಿಶ್ಚಂದ್ರ ದೇಗುಲ - ಐತಿಹಾಸಿಕ ಹಿನ್ನಲೆ

ವಿಶೇಷ ಲೇಖನ :

ಹರಿಶ್ಚಂದ್ರ ಎನ್ನುವದು ಒಂದು ಊರಿನ ಹೆಸರಾಗಿದ್ದು, ಇದು ಭಾಗಮಂಡಲದಿಂದ ಸುಮಾರು 27 ಕಿ. ಮಿ. ಹಾಗೂ ಮಡಿಕೇರಿಯಿಂದ 20 ಕಿ. ಮಿ. ಅಂತರದಲ್ಲಿದೆ. ಪುರಾತನ ಕಾಲದಲ್ಲಿ ಹರಿಶ್ಚಂದ್ರ ಮಹಾರಾಜ ಕಾವೇರಿ ನದಿಯ ದಂಡೆಯಲ್ಲಿ ಯಜ್ಞ-ಯಾಗಾದಿಗಳನ್ನು ನಡೆಸುತ್ತಿದ್ದನೆಂದು, ಆ ಪ್ರದೇಶಕ್ಕೆ ಕಾಲಾನಂತರ ಹರಿಶ್ಚಂದ್ರ ಪುರವೆಂಬ ಹೆಸರಾಯಿತೆಂದೂ ಕೆಲ ಗ್ರಂಥಗಳಲ್ಲಿ ಉಲ್ಲೇಖಿತಗೊಂಡಿದೆ.

ಕಾವೇರಿ ನದಿಯ ಬಲಭಾಗದ ದಂಡೆಯಲ್ಲಿರುವ ಹರಿಶ್ಚಂದ್ರ ದೇವಾಲಯ ಪ್ರದೇಶದಲ್ಲಿ ಸುಮಾರು 50 ಕ್ಕೂ ಪುಣ್ಯ ಕ್ಷೇತ್ರಗಳು ಅಡಗಿವೆ ಎಂದು ಪುರಾಣ ಕಥನಗಳನ್ನಾಧರಿಸಿ ಪರಂಪರಾಗತವಾಗಿ ಸಾಗಿ ಬಂದ ನಂಬಿಕೆ.

ಹರಿಶ್ಚಂದ್ರ ದೇವಾಲಯವನ್ನು ಕೇರಳ ಶೈಲಿಯಲ್ಲಿ ನಿರ್ಮಿಸಲಾಗಿದ್ದು, ಅಪೂರ್ವ ಕಲಾವೈಭವದಿಂದ ಕೂಡಿತ್ತು. ದೇವಾಲಯದ ಪ್ರದೇಶದಲ್ಲಿ ಒಂದು ತಿಂಗಳು ಅಥವಾ 15 ದಿವಸ ಸಾಧ್ಯವಾಗದಿದ್ದಲ್ಲಿ ಪಕ್ಷಾರ್ಧ (ಅಂದರೆ 7½ ದಿವಸ)ದಷ್ಟು ಕಾಲವಾದರೂ ತಂಗಿ ನಾನಾ ಹೋಮ, ಪೂಜೆ ಹವನಾದಿಗಳನ್ನು ನಡೆಸುವವರಿಗೆ ಅನಂತ ಪುಣ್ಯ ಫಲಗಳು ಪ್ರಾಪ್ತವಾಗುವದು ಎಂದು ಕಾವೇರಿ ಮಹಾತ್ಮೆ ಗ್ರಂಥದಲ್ಲಿ ಉಲ್ಲೇಖಿತಗೊಂಡಿದೆ.

## ಹಿನ್ನಲೆ

ಪಾಲೂರು ಶ್ರೀ ಹರಿಶ್ಚಂದ್ರ ದೇವಾಲಯ ಕಾವೇರಿ ತೀರದ ದ್ವಿತೀಯ ಶಿವ ದೇವಾಲಯವನ್ನಾಗಿ ಅಗಸ್ತ್ಯ ಮಹರ್ಷಿ ತಪವಗೈದು ಆ ಬಳಿಕ ಪ್ರತಿಷ್ಠಾಪಿಸಿದರೆಂದು, ಆ ಕಾರಣಕ್ಕಾಗಿಯೇ ನದಿರೂಪಿಣಿ ಕಾವೇರಿಯು ಸಾಕಷ್ಟು ಅಂತರದಲ್ಲಿ ಸುತ್ತುವರಿದು ಹರಿಶ್ಚಂದ್ರ ದೇಗುಲದ ಅಂಚಿನಲ್ಲಿ ಹರಿಯುತ್ತಿರುವುದು ಗೋಚರಿಸುತ್ತದೆ. ಅಗಸ್ತ್ಯರು ತಪವಗೈದರೆನ್ನಲಾದ ಯಾಗ ಮಂಟಪ ಇಂದಿಗೂ ಅಲ್ಲಿ ಗೋಚರಿಸುತ್ತದೆ.

ಐತಿಹಾಸಿಕ ಹಿನ್ನಲೆ, ಪರಂಪರೆಯಿಂದ ಕೂಡಿದ ಕೊಡಗು ಜಿಲ್ಲೆಯ ದೇಗುಲಗಳ ವೈಶಿಷ್ಟ್ಯ ತನ್ನದೇ ಆದ ಇತಿಹಾಸವಿದೆ. ಎರಡು ಸಹಸ್ರಮಾನಕ್ಕೂ ಹೆಚ್ಚಿನ ಇತಿಹಾಸವುಳ್ಳ ಪಾಲೂರು ಶ್ರೀ ಹರಿಶ್ಚಂದ್ರ ದೇಗುಲಕ್ಕೆ ಒಂದೊಮ್ಮೆ ನಿತ್ಯವೂ ವಿಶೇಷ ಪೂಜೆ ಸಲ್ಲುತ್ತಿತ್ತು. ಆ ದಿನಗಳಲ್ಲಿ ದೇಗುಲಕ್ಕಾಗಿಯೇ ಮೀಸಲಿಡಲ್ಪಟ್ಟ ಸುಮಾರು ಅರವತ್ತು ಎಕರೆ ಭೂಮಿ ಹಾಗೂ ನೂರಾರು ಎಕರೆ ಜಾಗ ಜಂಟಿ ಖಾತೆಯೊಂದಿಗೆ 'ಜೋಡಿ ಭೂಮಿ" ಎಂಬುದಾಗಿ ದೇವಾಲಯದ ಸೇವೆಗಾಗಿ ಮತ್ತು ಅಲ್ಲಿನ ಅರ್ಚಕ ಕುಟುಂಬಕ್ಕೆ ಮೀಸಲಾಗಿತ್ತು. ಕಾಲಾಂತರದಲ್ಲಿ ಸರಕಾರದ ನೀತಿಯಂತೆ ಉಳುವವನಿಗೆ ಭೂಮಿ, ಇರುವವರಿಗೆ ಮನೆ ಎಂಬ ಧೋರಣೆಯಿಂದಾಗಿ ಅಲ್ಲಿನ ಅರ್ಚಕ ಕುಟುಂಬ ದೇವಾಲಯಕ್ಕೆ ಸಂಬಂಧಿಸಿದ ಜಾಗ ಮತ್ತು ಭೂಮಿಯನ್ನು 2 ದಶಕಗಳ ಹಿಂದೆ ಮಾರಾಟಗೊಳಿಸಿರುವುದು ಗೋಚರಿಸುತ್ತದೆ. ಪರಿಣಾಮ ಅಂದಿನಿಂದ ಇಡೀ ಜಾಗ ಹಿಂದೂ ಧರ್ಮೀಯರ ಕೈ ತಪ್ಪಿ ಹರಿಶ್ಚಂದ್ರ ದೇಗುಲ ಮಾತ್ರ ಕೊಡಗು ದೇವಾಲಯ ನಿಧಿ ವ್ಯವಸ್ಥಾಪನಾ ಸಮಿತಿಯ ಹಿಡಿತದಲ್ಲಿ ನಿರ್ವಹಣೆಗೊಳ್ಳುತ್ತಿದೆ. ಆದಾಗ್ಯೂ ದೇವಾಲಯ ನಿಧಿ ವ್ಯವಸ್ಥಾಪನ ಸಮಿತಿ ಆಡಳಿತ ಮತ್ತು ಸಂಬಂಧ ಪಟ್ಟವರ ನಿರ್ಲಕ್ಷ್ಯದಿಂದಾಗಿ ಈ ದೇಗುಲದ ಮೇಲೆ ಹಲವು ಬಾರಿ ದಾಂಧಲೆ ನಡೆಸಿರುವ ನಿದರ್ಶನಗಳಿವೆ.

ಪ್ರಸಕ್ತ ಈ ದೇಗುಲಕ್ಕೆ ಹೊಂದಿಕೊಂಡಿರುವ ಹೆರವನಾಡು ಶ್ರೀ ಕ್ಷೇತ್ರಪಾಲ ದೇವರ ಬಲಿಪೀಠ ಕೂಡ ಅನ್ಯರಿಂದ ಅತಿಕ್ರಮಿಸಲ್ಪಟ್ಟಿದೆ. ಗ್ರಾಮಸ್ಥರೊಬ್ಬರ ಅನಿಸಿಕೆಯಂತೆ ಈ ದೇವಾಲಯದ ಒತ್ತಿನಲ್ಲಿರುವ ಭಾರಿ ಗಾತ್ರದ ಸಂಪಿಗೆ ಮರವನ್ನು ಕೆಲವರು ಕತ್ತರಿಸಲು ಮುಂದಾದಾಗ ಆ ಮರದಿಂದ ರಕ್ತ ವರ್ಣದಲ್ಲಿ ನೀರು ಬಂದಿರುವ ಪ್ರತೀತಿ ಇದೆ. ಇಂತಹ ಶಿವ ದೇವಾಲಯವೊಂದು ಇದೀಗ ಸಮರ್ಪಕ ರೀತಿಯಲ್ಲಿ ನಿತ್ಯ ಪೂಜೆಗೂ ಅವಕಾಶವಿಲ್ಲದಿದ್ದಾಗ ದುಷ್ಕರ್ಮಿಗಳ ಧಾಳಿಗೆ ತುತ್ತಾಗಿರುವದು ಮೇಲ್ನೋಟಕ್ಕೆ ಕಂಡುಬರುವ ವಿಚಾರ.

ಮಾತ್ರವಲ್ಲದೆ, ಕೊಡಗು ದೇವಾಲಯ ವಿಧಿ ವ್ಯವಸ್ಥಾಪನಾ ಸಮಿತಿ ಈ ದೇಗುಲದ ಪೂಜೆಗಾಗಿ ಮಾಸಿಕ ಮುಕ್ಕಾಲು ಲೀ. ನಷ್ಟು ಎಣ್ಣೆ, ಕೇವಲ ನಾಲ್ಕು ತೆಂಗಿನಕಾಯಿ ಇಷ್ಟನ್ನು ಮಾತ್ರ ಕಲ್ಪಿಸಿ, ಅರ್ಚಕರಿಗೆ ಮಾಸಿಕ ರೂ. 750 ವೇತನ ನೀಡುತ್ತಿರುವ ಕಾರಣ ಸಂಬಂಧಿಸಿದ ಅರ್ಚಕರೂ ಕೂಡ ದಿವ್ಯ ನಿರ್ಲಕ್ಷ್ಯ ತೋರುವದು ಕಂಡು ಬಂದಿದೆ.

## ಭಾವನಾತ್ಮಕ ಸಂಬಂಧ

ಕೊಡಗಿನ ಜನತೆ ಪಾಲೂರು ಹರಿಶ್ಚಂದ್ರ ಶಿವ ದೇವಾಲಯ ದೊಂದಿಗೆ ಭಾವನಾತ್ಮಕ ಸಂಬಂಧ ಬೆಳಸಿಕೊಂಡಿದ್ದು, ಪ್ರತಿ ತುಲಾ ಸಂಕ್ರಮಣ ಜಾತ್ರೆಯ ಸಂದರ್ಭ ಜೀವನದಿ ಕಾವೇರಿಯು ತಲ ಕಾವೇರಿಯಲ್ಲಿ ತೀರ್ಥರೂಪಿಣಿಯಾಗಿ ಅವಿರ್ಭವಗೊಂಡ ಮರು ಕ್ಷಣದಿಂದಲೇ ಹರಿಶ್ಚಂದ್ರ ದೇಗುಲದ ಬಳಿ ಕೊಡಗಿನ ಭಕ್ತ ಜನತೆ ಸಂಗಮಗೊಂಡು ತೀರ್ಥಸ್ನಾನ ಗೈದು ತಮ್ಮ ಪೂರ್ವಜರಿಗೆ ಪಿಂಡ ಪ್ರಧಾನ ಗೈದು, ಪಿತೃಕಾರ್ಯ ನೆರವೇರಿಸುವ ಸಂಪ್ರದಾಯ ಬೆಳೆದುಬಂದಿದೆ. ಇಗ್ಗುತ್ತಪ್ಪ ಪಾಡಿ ಶ್ರೀ ದೇಗುಲದ ನೇರ ಸಂಬಂಧವಿರಿಸಿಕೊಂಡಿರುವ ಪಾಲೂರು ಶ್ರೀ ಮಹಾಲಿಂಗೇಶ್ವರ ಸನ್ನಿಧಿಯ ವರ್ಷಂಪ್ರತಿ ಉತ್ಸವದ ಸಂದರ್ಭಗಳಲ್ಲಿ ಹರಿಶ್ಚಂದ್ರನಿಗೆ ಪ್ರಥಮ ಆದ್ಯತೆಯಲ್ಲಿ ಪೂಜೆ ಸಲ್ಲಿಸಲ್ಪಡುತ್ತದೆ. ಇಂತಹ ಐತಿಹಾಸಿಕ ಹಿನ್ನಲೆಯೊಂದಿಗೆ ಕೊಡಗಿನ ಜನತೆ ಭಾವನಾತ್ಮಕ ಸಂಬಂಧವಿರಿಸಿಕೊಂಡಿರುವ ಪಾಲೂರು ಶ್ರೀ ಹರಿಶ್ಚಂದ್ರ ದೇಗುಲ ಇಡೀ ಜಿಲ್ಲೆಯ ಜನತೆಯ ಭಾವನೆಯ ಪ್ರತೀಕವಾಗಿದೆ.

ಈ ದೇಗುಲವನ್ನು ಈಗಿನ ಪರಿಸ್ಥಿತಿಯಲ್ಲಿ ಮತ್ತು ನೆಪ ಮಾತ್ರಕ್ಕೆ ಜೀರ್ಣೋದ್ಧಾರಗೊಳಿಸಿದರೆ ಆ ಕಾರ್ಯ ಪೂರ್ಣ ವೆನಿಸದು. ಬದಲಾಗಿ ಈ ದೇಗುಲಕ್ಕೆ ಸಂಬಂಧಿಸಿದ ಎಲ್ಲಾ

13ನೇ ಪುಟಕ್ಕೆ

# ಧರ್ಮ ಮತ್ತು ರಾಜಕೀಯ - ಚಿಂತನೆ

ಆಯಾಯ ಧರ್ಮ ಪ್ರತಿಯೊಂದು ವ್ಯಕ್ತಿಯ ಬಾಳಿನೊಂದಿಗೆ ಹುಟ್ಟಿ ಬಂದು ತನ್ನೊಂದಿಗೆ ಬೆಳೆಯುವಂತಹದ್ದು. ಹಿಂದೂ ಧರ್ಮವು ತನ್ನ ವೈವಿಧ್ಯದಲ್ಲಿ ಸದಾ ಏಕತೆಯನ್ನು ಕಂಡಿರುವ ಅತೀ ಪುರಾತನ ಇತಿಹಾಸವಿರುವ ಈ ಧರ್ಮಕ್ಕೆ ರಕ್ತಗತವಾಗಿ ಬಂದಿರುವ ಸಂಸ್ಕೃತಿಯ ಪ್ರೇರಣಾ ಶಕ್ತಿಯು ವ್ಯಕ್ತಿಯ ಬಾಳಿನೊಂದಿಗೆ ಬೆಳೆಯುದಲ್ಲದೆ, ಅದು ಮೂಲ ಕಟ್ಟಿನ ಆಚರ-ವಿಚಾರ ಮತ್ತು ಆಕಾಂಕ್ಷೆಗಳನ್ನು ರೂಪಿತಗೊಳಿಸಲು ಸದಾ ಪ್ರಯತ್ನಿಸುತ್ತಿರುತ್ತದೆ. ಇಷ್ಟೊಂದು ಹಳೆಯ ಇತಿಹಾಸ ವಿರುವುದರಿಂದಲೇ ತನ್ನ ಕಾಲಗತಿಯಲ್ಲಿ ತನ್ನ ಶ್ರೇಷ್ಟತೆಯನ್ನು ಉಳಿಸಿಕೊಂಡಿದೆ. ಈ ವಿಶಿಷ್ಟ ಹಿಂದೂ ಸಂಸ್ಕೃತಿಯ ಸಂರಕ್ಷಣೆ ಮತ್ತು ಅದನ್ನು ಬೆಳೆಸುವ ಚಿಂತನೆಯ ಜತೆಗೆ ನಾವು ಪ್ರಯತ್ನ ಸಹ ಮಾಡಬೇಕಾಗಿದೆ. ಬಾಳಿನಲ್ಲಿ ಭಿನ್ನತೆಗಳಿವೆ; ಆದರೆ ಅದು ತನ್ನ ಯಾವುದೇ ಜನಾಂಗದ ಆಚಾರ-ವಿಚಾರ ಕಟ್ಟುಪಾಡುಗಳನ್ನು ಅವರವರ ವಿಚಾರಧಾರೆಯತ್ತ ಕೊಂಡೊಯ್ದಿದೆ. ಈ ಅನುರಕ್ತ ಶಕ್ತಿಯಿಂದಾಗಿ ಜನರು ತಮ್ಮ ಪಾಲಿನ ವಿಶಿಷ್ಟ ಕೊಡುಗೆಯನ್ನು ನೀಡುವುದರೊಂದಿಗೆ ಧರ್ಮದ ಮೂಲಕ್ಕೆ ಧಕ್ಕೆ ಬಾರದಂತೆ ಎಚ್ಚರವಹಿಸುತ್ತಾರೆ. ಈ ವಿಚಾರವನ್ನು ಗಮನಿಸುವಾಗ ಹಿಂದೂಧರ್ಮದ ಅಡಿಯಲ್ಲಿ ವಿಶಾಲ ಮನೋಭಾವವುಳ್ಳ ಅದರ ಮೆಚ್ಚುಗೆಯನ್ನು ವ್ಯಕ್ತ ಪಡಿಸುವ ಅನುಯಾಯಿಗಳು ವಿಶ್ವದ ನಾನಾ ಭಾಗಗಳಲ್ಲಿದ್ದಾರೆ.

ಪ್ರಜಾಪ್ರಭುತ್ವ ಸರಕಾರವನ್ನು ಉಳಿಸಿಕೊಂಡು ಬರುತ್ತಿರುವ ಹಿಂದೂದೇಶವು ನಾನಾ ಮತಗಳ ಪ್ರಜೆಗಳನ್ನು ಏಕ ಸಮಾನದಿಂದ ಆಳುವ ಪಣತೊಟ್ಟು ರಾಜಕಾರಣಿ (ಶಾಸಕರು)ಗಳು ಆಳುತ್ತಿದ್ದಾರೆ. ಯಾವ ಧರ್ಮವೂ ಕೂಡಾ ಸತ್ಯ, ದಾನ ಧರ್ಮ ಮತ್ತು ಅನುಕಂಪಗಳ ವಿರೋಧ ಬೋಧನೆ ಮಾಡುವುದಿಲ್ಲ. ಪ್ರತಿಯೊಂದು ಧರ್ಮದಲ್ಲಿಯೂ ಧರ್ಮಸಂಸ್ಕೃತಿಗೆ ಅಗ್ರಸ್ಥಾನವಿದೆ. ಪ್ರಾಚೀನ ಭಾರತದ ಮುಖಂಡರುಗಳು ಧರ್ಮಪಾಲನೆಯಲ್ಲಿ ಹೆಸರು ವಾಸಿಗಳಾಗಿದ್ದರು. ಸಹ ಜೀವನ ಕ್ರಮವನ್ನು ಕಲಿಸಲು ಅನುಕೂಲವಾಗುವಂತೆ ದೇವಾಲಯಗಳನ್ನು ನಿರ್ಮಿಸುತ್ತಿದ್ದರು. ಭರತಖಂಡದ ವಿಶಾಲವಾದ ಈ ಭೂಮಿಯಲ್ಲಿ 5 ಸಾವಿರ ವರ್ಷಗಳ ಪುರಾತನ ಹಿಂದೂ ಸಂಸ್ಕೃತಿಯನ್ನು ಇಂದಿನ ನಮ್ಮ ಧರ್ಮಪಾಲಕರಾದ ರಾಜಕಾರಣಿಗಳು ನಿರ್ಲಕ್ಷಿಸಿಕೊಂಡು ಬರುತ್ತಿರುವುದು ಶೋಚನೀಯ ಸಂಗತಿಯೇನೂ ಅಲ್ಲ. ಈ ಬೆಳವಣಿಗೆಯು ದೇಶವ್ಯಾಪ್ತಿ, ಅಶಾಂತಿ, ಅಸ್ಥಿರತೆಗಳನ್ನು ತಾಂಡವವನ್ನಾಡುವಂತೆ ಮಾಡುತ್ತಿದೆ. ರಾಜಕೀಯತೆ ಧರ್ಮದ ಪ್ರವೇಶ ಮಾಡಕೂಡದು. ಆದರೆ ನಾನಾ ರಾಜಕೀಯ ಪಕ್ಷಗಳ ಪೈಪೋಟಿ ಭರವಸೆಯ ಜೀವನದಡಿ ಧರ್ಮಗಳಿಗೆ ಧಕ್ಕೆ ಯುಂಟಾಗುತ್ತಿದೆ. ಸಂಸ್ಕೃತಿಯ ರಕ್ಷಣೆ ನೆಪದಲ್ಲಿ ಧರ್ಮದ ಗುರು ಯಾಕೆ ದೇವರುಗಳೇ ತಮ್ಮ ಸಂರಕ್ಷಣೆಯನ್ನು ಮಾಡಬೇಕಾಗಿ ಬಂದಿದೆ. ಇತ್ತೀಚಿನ ವಿದ್ಯಮಾನಗಳ ಅನುಭವದ ಸಾರವಾಗಿ ಕೊಡಗು ಜಿಲ್ಲೆಯ ಪಾಲೂರು ಗ್ರಾಮ ಧರ್ಮೀಯ ಗಲಭೆಗಳು ಸತ್ಯಪಾಲನೆಯಲ್ಲಿ ಅಸಾವಧಾನತೆಯನ್ನು ಎತ್ತಿ ತೋರಿಸಿದೆ. ಹಿಂದೂ ಧರ್ಮದ ಭೂತಾಯಿಯು ಸಹಿಷ್ಣುತೆಯಿಂದಾಗಿ ಬಳಲುತ್ತಿದೆ. ನಾನಾ ಸಂಘ ಸಂಸ್ಥೆ ಸಮಾಜ ಹಾಗೂ ಅಕಾಡಮಿಗಳು ಹುಟ್ಟಿಕೊಳ್ಳಲು ಅವಕಾಶ ಕಂಡುಕೊಳ್ಳಲಾಗಿ ಪರಸ್ಪರ ವಿರೋಧ ಮನೋಭಾವನೆಗಳ ದೃಷ್ಟಿಕೋನ ಬೀರುತ್ತಿವೆ. ಆಯಾ ಸಮಾಜಗಳ ಧಾರ್ಮಿಕ ಜೀವನ ನಿರ್ವಹಣೆಗೆ ಧರ್ಮವು ರಕ್ಷಕವಾದರೂ ರಾಜಕೀಯ ಪಕ್ಷಗಳ ಕೈವಾಡದಿಂದಾಗಿ ಧರ್ಮಶಾಸ್ತ್ರಕ್ಕೆ ಅರ್ಥ ವಿಲ್ಲದಂತಾಗಿದೆ. ಇದು ಅಧರ್ಮ, ಅಸತ್ಯತೆ ಅನ್ಯಾಯ ಮತ್ತು ಅದಯೆಗಳಿಗೆ ಎಡೆಮಾಡಿಕೊಡುವುದನ್ನು ನಮ್ಮ ನಿತ್ಯ ಜೀವನದಲ್ಲಿ ನಾವು ಕಾಣುತ್ತಿದ್ದೇವೆ. ದುಷ್ಟರ ರಕ್ಷಣೆ ಅಮಾಯಕರಿಗೆ ಶಿಕ್ಷೆ ಇದೇ ಇಂದಿನ ವಾತಾವರಣದ ಪರಿಪಾಠ ಆಗಿದೆ. ಈ ನೆಲ ಜಲ ವಾಯು ಎಲ್ಲರ ಸೊತ್ತು, ಇವುಗಳಲ್ಲಿ ಪ್ರತಿಯೊಬ್ಬರಿಗೂ ಸಮಾನ ಹಕ್ಕಿದೆ. ನೆಲಕ್ಕೆ ಮಿತಿಯಿರುವುದರಿಂದ ಅದನ್ನು ಹೆಚ್ಚಿಸಲು ಸಾಧ್ಯವಿಲ್ಲ. ಆದರೆ ಜನಸ್ಫೋಟವು ಒಂದು ಕಡೆ ನಡೆಯುತ್ತಲೆ ಇದೆ. ಜನಸ್ಫೋಟನಕ್ಕೆ ಸರಕಾರವು ಕಾನೂನಿನ ಅಡಿಯಲ್ಲಿ ಸೂಕ್ತ ತಿದ್ದುಪಡಿ ತಂದುಕೊಳ್ಳಬೇಕಾಗಿದೆ. ಇತ್ತ ಕೋಲು ಮುರಿಯಬಾರದು ಅತ್ತ ಹಾವು ಸಾಯಬಾರದು ಎಂಬ ಧ್ವಂಧ್ವ ತತ್ವಗಳಿಂದಾಗಿ ನೆಮ್ಮದಿಯ ನೆಲೆ ಇನ್ನೆಲ್ಲಿ ಎಂದು ಚಿಂತಿಸುವುದು ಸಹಜವಾಗಿದೆ. ಸುಳ್ಳು ವಂಚನೆ ಮೋಸ ದರೋಡೆಗಳು ನಿರಂತರವಾಗಿ ನಡೆಯುತ್ತಿವೆ. ಧರ್ಮಶಾಸ್ತ್ರಗಳು ಅಂದು ಕಂಡ ಕನಸು ಅಂದಿಗಷ್ಟೆ ನನಸಾಗಿ ಬರ ಬರುತ್ತಾ ಅಸಹಜ ಜೀವನಕ್ಕೆ ಎಡೆ ಮಾಡಿಕೊಡುತ್ತಿವೆ. ರಾಜಕೀಯ ಪ್ರವೇಶವು ಧರ್ಮದ ಸಾರವನ್ನು ಕಿತ್ತೊಗೆಯದೆ ಸತ್ಯಕ್ಕೆ ಬೆಲೆ ಇತ್ತು ಅದರ ರಕ್ಷಣೆ ಮಾಡಬೇಕಾಗಿದೆ. ರಾಜಕಾರಣಿಗಳು ಚುನಾವಣೆಗೆ ಮುನ್ನ ನಾನಾ ಭರವಸೆಗಳನ್ನಿತ್ತು ಗೆದ್ದು ಪಟ್ಟಕ್ಕೆ ಏರಿದ ಮೇಲೆ ಬರೇ ಪಕ್ಷ ಕಟ್ಟುವ ಆಸೆಯಿಂದ ಹೆಚ್ಚಿನ ಸಂಖ್ಯೆಯಲ್ಲಿ ಅದರ ಅನುಯಾಯಿಗಳು ಅಧರ್ಮೀಯ ಮಾರ್ಗವನ್ನು ಅನುಸರಿಸಿ ತಮ್ಮ ಗುಟ್ಟು ಒಮ್ಮೊಮ್ಮೆ ಉದ್ರಿಕ್ತ ಪರಿಸ್ಥಿತಿಯನ್ನು ಆಹ್ವಾನಿಸುವುದನ್ನು ನಾವು ನಿತ್ಯ ಜೀವನದಲ್ಲಿ ಕಾಣುತ್ತಿದ್ದೇವೆ.

ನಮ್ಮ ಧರ್ಮೀಯ ಶಾಸ್ತ್ರದಂತೆ ಸಹಜೀವನ ಕಾಣ ಬೇಕಾದರೆ ಮೊದಲಿಗೆ ಸಂಸ್ಕಾರವನ್ನು ಕಲಿಯಬೇಕು. ಶಾಂತಿ ಸಹನೆ ಸೌಹಾರ್ದ ಎಂಬ ಪದಗಳ ಅರ್ಥವನ್ನು ತಿಳಿಯದ ಜನರಿಂದಲೇ ಕೋಮುಗಲಭೆ ದಳ್ಳುರಿಯ ವಾತಾವರಣ ಸೃಷ್ಟಿಯಾಗುತ್ತಿರುವುದು. ಸಹ ಜೀವನ, ಸತ್ಯಪಾಲನೆ, ನಾವು ಕಾಣ ಬೇಕಾದರೆ ಕೊ. ಸಂಗಾತಿ ಸಂಚಿಕೆ ಡಿ. 1-31 ರ ಪುಠ 19 ರಲ್ಲಿ ಹಿರಿಯ ಲೇಖಕ ಹಾಗೂ ಸಮಾಜ ಚಿಂತಕರಾದ ಶ್ರೀ ಚೇಂದ್ರಿಮಾಡ ಗ. ಮುತ್ತಪ್ಪನವರ 'ಒಂದ್ಮಾತು' ಅದರಲ್ಲಿ ತಮ್ಮ ಅಂತಾಳದಿಂದ ಮೂಡಿ ಬಂದ

12ನೇ ಪುಟಕ್ಕೆ

# ಮೈಸೂರಿನಲ್ಲಿ ಗೌಡ ವಧೂವರರ ಮುಖಾ ಮುಖಿ ಕಾರ್ಯಕ್ರಮ

## ಕಡೆ ಗಳಿಗೆಯಲ್ಲಿ ಅರ್ಜಿಗಳಿಗೆ ನೂಕು ನುಗ್ಗಲು

**"ಸಂಸ್ಕೃತಿಯ ಉಳಿವು ಮಹಿಳೆಯರಿಂದ ಮಾತ್ರ ಸಾಧ್ಯ" : ಪೂಜಾರಿ ಮೊಣ್ಣಪ್ಪ ಉವಾಚ**

ತಾಯಿ ಮಗುವಿನ ಮೊದಲ ಗುರು. ತಾಯಿಯಿಂದ ಸಂಸ್ಕೃತಿ ಮಗುವಿನ ಮೂಲಕ ಮುಂದಿನ ಜನಾಂಗಕ್ಕೆ ಹರಿಯಲ್ಪಡುತ್ತದೆ. ಆದುದರಿಂದ ಸಂಸ್ಕೃತಿಯ ಉಳಿವಿಗೆ ಮಹಿಳೆ ಮುಖ್ಯ. ಇಂದು ನಮ್ಮ ಸಂಸ್ಕೃತಿ ಜೀವಂತವಾಗಿರುವುದಾದರೆ ಅದಕ್ಕೆ ಮಹಿಳೆಯರೇ ಮೂಲ ಕಾರಣ. ಸಂಸ್ಕೃತಿಯ ಅಳಿವು-ಉಳಿವು ನಮ್ಮ ಮಹಿಳೆಯರನ್ನು ಅವಲಂಬಿಸಿದೆ. ಅವರು ನಮ್ಮ ಸಂಸ್ಕೃತಿಯನ್ನು ಉಳಿಸಿ, ಬೆಳೆಸಿ ಮುಂದಿನ ಜನಾಂಗಕ್ಕೆ ರವಾನಿಸಬೇಕೆಂದು, ಹಿರಿಯ ಗೌಡ ಚೇತನ, ಗೌಡ ಸಾಹಿತ್ಯ ಕ್ಷೇತ್ರದ ಭೀಷ್ಮರೆಂದೇ ಖ್ಯಾತರಾದ ಶ್ರೀ ಪೂಜಾರಿ ಮೊಣ್ಣಪ್ಪನವರು ಕರೆ ನೀಡಿದ್ದಾರೆ.

ಅವರು ಡಿಸಂಬರ್ 16 ರಂದು ಮೈಸೂರಿನ ಸಿದ್ಧಾರ್ಥ ಹೊಟೇಲಿನ ಚತುರ್ಥಂತಸ್ತಿನ ಸಭಾಂಗಣದಲ್ಲಿ ಏರ್ಪಡಿಸಿದ 'ಗೌಡ ವಧೂ-ವರರ ಮುಖಾ ಮುಖಿ' ಕಾರ್ಯಕ್ರಮವನ್ನು ಉದ್ಘಾಟಿಸಿ ಮಾತನಾಡುತ್ತಾ ಆ ಕಾರ್ಯಕ್ರಮವನ್ನು ಪ್ರಾಯೋಜಿಸಿದ ಕೊಡಗು ಮತ್ತು ದ. ಕನ್ನಡ ಗೌಡ ಮಹಿಳಾ ಸಂಘವನ್ನು ಪ್ರಶಂಸಿಸಿದರಲ್ಲದೆ, ಈ ಕೆಲಸ 'ಮುತ್ತಿನ ಮಾಲೆಯಲ್ಲಿನ ಮುತ್ತುಗಳಂತೆ' ಎಂದು ಕೊಂಡಾಡಿ, ಬೆಂಗಳೂರಿನ ಕೊಡಗು ಮತ್ತು ದ. ಕನ್ನಡ ಗೌಡ ಸಮಾಜದ ಅಧ್ಯಕ್ಷರಾದ ದಂಬೆಕೋಡಿ ಆನಂದರವರ ಸಾಧನೆಯನ್ನು ಶ್ಲಾಘಿಸಿದರು. ಮುಂದುವರಿದ ಅವರು ಇಂತಹ ಕಾರ್ಯ ಕೇವಲ ನಗರ ಜನರಿಗೆ ಸೀಮಿತವಾಗಿರದೆ ನಮ್ಮ ಮೂರು ಲಕ್ಷ ಜನರನ್ನೂ ತಟ್ಟುವಂತಾಗಬೇಕು. ಹಳ್ಳಿ ಹಳ್ಳಿಗಳಲ್ಲಿ ಜನ ಸಂಘಟಿತರಾಗಬೇಕು. ಅಲ್ಲದೆ ನಮ್ಮ ಜನಾಂಗದಲ್ಲಿ ಯಾರೇ ಏನೇ ಸಾಧನೆ ಮಾಡಿದರೂ ಅದನ್ನು ಎಲ್ಲರೂ ಪ್ರೋತ್ಸಾಹಿಸಬೇಕು. ಪ್ರೋತ್ಸಾಹ ಕೇವಲ ಬಾಯಿ ಮಾತಿನಲ್ಲಿರದೆ ಧನ ಸಹಾಯದ ರೂಪದಲ್ಲಿಯೂ ಇರಬೇಕು. ಆಗ ಮಾತ್ರ ಜನಾಂಗ ಮುನ್ನಡೆಯಲು ಸಾಧ್ಯವಾಗುತ್ತದೆ ಎಂದು ಅಭಿಪ್ರಾಯ ಪಟ್ಟರು.

**ಸಾಮೂಹಿಕ ವಿವಾಹಕ್ಕೆ ಉತ್ತೇಜನ : ದಂಬೆಕೋಡಿ ಎಸ್. ಆನಂದ.**

ಇದೇ ಕಾರ್ಯಕ್ರಮದಲ್ಲಿ ಪ್ರಸ್ತಾವಿಕ ಭಾಷಣ ಮಾಡಿದ ಬೆಂಗಳೂರಿನ ಕೊಡಗು ಮತ್ತು ದ. ಕನ್ನಡ ಗೌಡ ಸಮಾಜದ, ಅಧ್ಯಕ್ಷರಾದ ಶ್ರೀ ದಂಬೆಕೋಡಿ ಆನಂದರವರು, ಇಂತಹ ಕಾರ್ಯ ಕ್ರಮವನ್ನು ಈ ಹಿಂದೆಯೇ ಬೆಂಗಳೂರಿನಲ್ಲಿ ಆಯೋಜಿಸಿದ್ದರೂ ಅದು ಹೆಚ್ಚು ಫಲಕಾರಿಯಾಗಿಲ್ಲ. ಇಂದಿನ ಕಾರ್ಯಕ್ರಮ ಯಶಸ್ಸುಗೊಂಡರೆ ಮುಂದೆ ಪ್ರತಿವರ್ಷವೂ ಇಂತಹ ಕಾರ್ಯಕ್ರಮ ಹಮ್ಮಿಕೊಳ್ಳಲಾಗುವುದು ಎಂದರು.

ಮುಂದುವರಿದು ಮಾತನಾಡಿದ ಅವರು ಇದೊಂದು ನಮ್ಮ ಮದುವೆ ಕಾರ್ಯಕ್ರಮದ ಪ್ರಮುಖ ಸುಧಾರಣೆಯಾಗಿದೆ. ಇಲ್ಲಿ ಪ್ರತಿಯೊಬ್ಬ ಯುವಕ, ಯುವತಿಯರಿಗೆ ತಮ್ಮ 'ಬಾಳ ಸಂಗಾತಿ' ಯನ್ನು ಆಯ್ಕೆ ಮಾಡಿಕೊಳ್ಳಲು ವಿಶಾಲ ವೇದಿಕೆ ಸಿಗುತ್ತದೆ, ನಮ್ಮ ಜನಾಂಗದಲ್ಲಿ ಎಂಥೆಂತಹ ಯುವಕ ಯುವತಿಯರಿದ್ದಾರೆ ಎಂಬುದನ್ನು ತಿಳಿಯಲು ಈ ಕಾರ್ಯಕ್ರಮ ಅನುವು ಮಾಡಿ ಕೊಡುತ್ತದೆ. ಇದರಿಂದ ನಮ್ಮ ಜನಾಂಗದ ವಧೂ-ವರರು ವಧುವರಾನ್ವೇಷಣೆಗೆ ಅನ್ಯ ಜನಾಂಗದ ಮೊರೆ ಹೋಗ ಬೇಕಾದ ಅವಶ್ಯಕತೆಯಿರುವುದಿಲ್ಲ. ಈ ಕಾರ್ಯಕ್ರಮದ ಸದುಪಯೋಗವನ್ನು ಸರ್ವರು ಪಡೆದು ಕೊಂಡು ಸಫಲಗೊಳಿಸಿದರೆ ಮುಂದೆ ವಿವಿಧ ಸ್ಥಳಗಳಲ್ಲಿ ಸಾಮೂಹಿಕ ವಿವಾಹದ ಯೋಜನೆಯನ್ನು ಹಮ್ಮಿಕೊಳ್ಳಲಾಗುವುದು. ಇದರಿಂದ ಜನತೆಗೆ ಸಾಕಷ್ಟು ಆರ್ಥಿಕ ಲಾಭ ದೊರೆಯುವಂತಾಗುತ್ತದೆ ಅಲ್ಲದೆ ಜನಾಂಗ ಪ್ರಗತಿದಾಯಕ ಸುಧಾರಣೆಯತ್ತ ಹೊರಳಿದಂತಾಗುತ್ತದೆ ಎಂದು ಅವರು ಅಭಿಪ್ರಾಯ ಪಟ್ಟರು.

ಕೊಡಗು ಮತ್ತು ದ. ಕನ್ನಡಗೌಡ ಸಮಾಜ ಬೆಂಗಳೂರು, ಮೈಸೂರು, ಮಡಿಕೇರಿ, ಮಂಗಳೂರು ಇವರ ಸಂಯುಕ್ತ ಆಶ್ರಯದಲ್ಲಿ ಹಮ್ಮಿಕೊಂಡಿದ್ದ ಈ ಕಾರ್ಯಕ್ರಮ ಪಾಣತ್ತಲೆ ವಸಂತಿಯವರ ಪ್ರಾರ್ಥನೆಯೊಂದಿಗೆ ಆರಂಭಗೊಂಡಿತು. ಬೆಂಗಳೂರು ಗೌಡ ಮಹಿಳಾ ಸಂಘದ ಅಧ್ಯಕ್ಷೆ ಕುಯ್ಯಮುಡಿ ಸುಶೀಲಾ ಉಲ್ಲಾಸರವರು ಸ್ವಾಗತಿಸಿದರೆ, ನೂಜಿ ದಿನಕರಗೌಡರವರು ವಂದಿಸಿದರು. ನಂಗಾರು ಲಿಂಗರಾಜು ಮತ್ತು ತೆಕ್ಕಡೆ ಕಾವೇರಪ್ಪ ಕಾರ್ಯಕ್ರಮ ನಿರ್ವಹಿಸಿದರು. ತೇನನ ರಾಜೇಶ್, ದಿನಕರಗೌಡರು, ಕುಯ್ಯಮುಡಿ ಸುಶೀಲಾ, ದಂಬೆಕೋಡಿ ಭಾಗೀರಥಿ ಮೊದಲಾದವರು ಸಂಪರ್ಕಾಧಿಕಾರಿಗಳಾಗಿ ಕಾರ್ಯನಿರ್ವಹಿಸಿದರೆ, ಬೆಂಗಳೂರು ಗೌಡ ಸಮಾಜದ ಉಪಾಧ್ಯಕ್ಷ ತಿಮ್ಮಪ್ಪಗೌಡ, ಕಾವೇರಿ ಮನೆ ಬೋಜಪ್ಪ, ಅಮ್ಮಾಜೀರ ಪೊನ್ನಪ್ಪ ಅಮೆ ಮನೆ ಶಿವರಾಯ, ನೆಯ್ಯಣಿರ ಕುಶಾಲಪ್ಪ, ಕೊಡಗು ಸಂಗಾತಿ ಸಂಪಾದಕಿ ಪಟ್ಟಡ ಶೀಲಾಮಣಿ ಮತ್ತು ಕೊಡಗು ಸಂಗಾತಿಯ ಗೌರವ ಸಂಪಾದಕ ಪಟ್ಟಡ ಪ್ರಭಾಕರ ಮೊದಲಾದ ಗಣ್ಯರು ಉಪಸ್ಥಿತರಿದ್ದರು. ಸುಮಾರು 90ಜನ ಅಭ್ಯರ್ಥಿಗಳ ಮುಖಾ ಮುಖಿ ಕಾರ್ಯಕ್ರಮದಲ್ಲಿ ತಮ್ಮನ್ನು ತಾವು ಪರಿಚಯಿಸಿಕೊಂಡರು.

**ಆಸಕ್ತಿ ಕೆರಳಿಸಿದ ಮುಖಾ-ಮುಖಿ ಕಾರ್ಯಕ್ರಮ ನಿರೀಕ್ಷೆಗೂ ಮೀರಿದ ಜನಸಾಗರ**

ಡಿಸೆಂಬರ್ 16 ರಂದು ಮೈಸೂರಿನ ಪ್ರಸಿದ್ಧ ಸಿದ್ಧಾರ್ಥ ಹೊಟೇಲಿನ ಪರಿಸರದಲ್ಲಿ 'ಗೌಡ ಮಯ' ವಾತಾವರಣ. ವೈದ್ಯರು, ಇಂಜಿನಿಯರು, ಲಾಯರ್ಸ್‌ಗಳು, ಟೀಚರು, ಖಾಸಾಗಿ ಸಂಸ್ಥೆ ಯವರು, ಸರಕಾರಿ ನೌಕರರು, ಸೇನೆ ಯೋಧರು ಮೊದಲಾದವರ ಆಗಮನ. ಕಾರ್ಯಕ್ರಮ ಆರಂಭದ ಹೊತ್ತಿಗೆ ತುಂಬಿ ಹೋದ ಸಭಾಂಗಣ ಬೆರಳೆಣಿಕೆಯಷ್ಟು ಮಾತ್ರ ಕಂಡು ಬಂದ ಹಳ್ಳಿ ಜನ, ಉಳಿದವರೆಲ್ಲರೂ ಬೆಂಗಳೂರು, ಮೈಸೂರು, ಪುತ್ತೂರು, ಸುಳ್ಯ ಗಳಲ್ಲಿ ನೆಲೆಸಿರುವ ಗೌಡಜನ. ಅದೇ ದಿನವೂ ಹೆಸರು ನೋಂದಾಯಿಸಿ ಕೊಳ್ಳಲು ಅವಕಾಶ ವಿದ್ದುದರಿಂದ ಪೂರ್ವತಯಾರಿಯಿಲ್ಲದೆ

---

ವಿಶ್ವದಲ್ಲಿ ಸುಮಾರು 2792 ಆಡು ಭಾಷೆಗಳಿವೆ.

ಕಳೆಗುಂದಿದ ನಿರ್ವಹಣೆ, ಆದರೂ ಕೊಂಚ ಸುಧಾರಣೆ, ಇದು 'ಕೊಡಗು ಸಂಗಾತಿಗೆ' ಅಂದಿನ ದಿನದ ಕಾರ್ಯಕ್ರಮದಲ್ಲಿ ಕಂಡು ಬಂದ ಅಂಶಗಳು

**ಏನು ಈ ಮುಖಾ-ಮುಖಿ ಕಾರ್ಯಕ್ರಮ?**

ವಧೂ-ವರರ ಮುಖಾ-ಮುಖಿ ಕಾರ್ಯಕ್ರಮ ಯಾವ ರೀತಿ ನಡೆಯುತ್ತದೆ ಎನ್ನುವ ಕುತೂಹಲ ಹಲವರನ್ನು ಕಾಡುತ್ತಿತ್ತು. ಈ ಕುತೂಹಲಕ್ಕೆ ಪೂರ್ಣವಿರಾಮ ಹಾಕಿದ್ದು ಡಿ. 16ರ ಕಾರ್ಯಕ್ರಮ. ಕಾರ್ಯಕ್ರಮ ಆರಂಭಕ್ಕೆ ಮೊದಲು, ಭಾಗವಹಿಸುವವರ ಕೈಗೆ ಒಂದು ನೋಟ್‌ಬುಕ್ ಮತ್ತು ಪೆನ್ನನ್ನು ನೀಡಲಾಗುತ್ತದೆ. ನಂತರ ಮೊದಲು ಹೆಸರು ನೋಂದಾಯಿಸಿಕೊಂಡವರನ್ನು ಕರೆಯಲಾಗುತ್ತದೆ. ಅವರು ವೇದಿಕೆಗೆ ಹೋಗುತ್ತಾರೆ. ಹೆಸರು ನೋಂದಾಯಿಸುವಾಗ ಒಂದು ಅರ್ಜಿಯಲ್ಲಿ ತಮ್ಮ ಹೆಸರು, ತಂದೆಯ ಹೆಸರು, ಮನೆ ಹೆಸರು, ಗೋತ್ರ, ಉದ್ಯೋಗ ಮೊದಲಾದವನ್ನು ಬರೆಯುವುದರ ಜೊತೆಗೆ ತಾವು ಅಪೇಕ್ಷಿಸುವ ವಧು-ವರರ ಅರ್ಹತೆಯನ್ನು ನಮೂದಿಸಿರುತ್ತಾರೆ. ವೇದಿಕೆಗೆ ಅವರು ಹತ್ತಿ ಸ್ವತಃ ತಾವೇ ಸ್ವಯಂ ಪರಿಚಯ ಮಾಡಿಕೊಳ್ಳಬಹುದು. ಇಲ್ಲದಿದ್ದರೆ ನಿರೂಪಕರು ಅವರ ಅರ್ಜಿಯಲ್ಲಿ ಭರ್ತಿ ಮಾಡಿರುವ ವಿಷಯಗಳನ್ನು ಓದಿ ಹೇಳುತ್ತಾರೆ. ಸಭಾಂಗಣದಲ್ಲಿರುವವರು, ವೇದಿಕೆಯಲ್ಲಿರುವ ವಧು-ವರರನ್ನು ಇಷ್ಟ ಪಟ್ಟರೆ ಅವರ ದೂರವಾಣಿ ಸಂಖ್ಯೆ ಅಥವಾ ವಿಳಾಸವನ್ನು ತಮಗೆ ಮೊದಲೇ ನೀಡಲ್ಪಟ್ಟ ಪುಸ್ತಕದಲ್ಲಿ ಬರೆದುಕೊಳ್ಳುತ್ತಾರೆ. ನಂತರ ಅಗತ್ಯಬಿದ್ದರೆ ಅಲ್ಲೆ ಸಂಪರ್ಕಿಸ ಬಹುದು. ಅಥವಾ ನಿಧಾನವಾಗಿಯೂ ಸಂಪರ್ಕಿಸಬಹುದು, ಹೀಗೆ ಪರಸ್ಪರ ವಧೂ-ವರರನ್ನು ಪರಿಚಯಿಸುವುದು. ಪರಸ್ಪರ 'ಬಾಳ ಸಂಗಾತಿ'ಯ ಆಯ್ಕೆಗೆ 'ವಿಶಾಲ ಚೌಕಟ್ಟನ್ನು' ಒದಗಿಸುವ ಕಾರ್ಯಕ್ರಮವೇ 'ವಧೂ-ವರರ ಮುಖಾ ಮುಖಿ' ಕಾರ್ಯಕ್ರಮ. ಮೈಸೂರಿನಲ್ಲಿ ನಡೆದ ಈ ಕಾರ್ಯಕ್ರಮ ಹೆಚ್ಚು ಕಡಿಮೆ ಯಶಸ್ವಾಗಿದ್ದು ಹಲವು ಗಣ್ಯರನ್ನು, ಅಭ್ಯರ್ಥಿಗಳನ್ನು, ಪೋಷಕರನ್ನು 'ಕೊಡಗು ಸಂಗಾತಿ' ಆ ಕಾರ್ಯಕ್ರಮದ ಬಗ್ಗೆ ಸಂದರ್ಶಿಸಿದಾಗ ಈ ಕೆಳಗಿನಂತೆ ಪ್ರತಿಕ್ರಿಯಿಸಿದ್ದಾರೆ.

**ಮಡಿಕೇರಿ ಮಾಜಿ ಪುರಸಭಾಧ್ಯಕ್ಷ ಮುಕ್ಕಾಟಿ ವಾಸುದೇವರವರು :** ಇಂತಹ ಕಾರ್ಯಕ್ರಮ ಬಹಳ ಉತ್ತಮವಾದುದು. ಇಲ್ಲಿ ಬಹಿರಂಗವಾಗಿ ಯುವಕ-ಯುವತಿಯರು ತಮ್ಮ ಸಂಗಾತಿಗಳನ್ನು ಆಯ್ಕೆ ಮಾಡಲು ಸಾಧ್ಯವಾಗುತ್ತದೆ. ನವ ಜೋಡಿಗಳಿಗೆ ಹಾಗೂ ಅವರ ಪೋಷಕರಿಗೆ ಈ ಕಾರ್ಯಕ್ರಮ ಆಶಾದಾಯಕವಾದುದು. ಹಳ್ಳಿಗಳಲ್ಲಿ ವಧುವರಾನ್ವೇಷಣೆ ತ್ರಾಸದಾಯಕವಾದ ಕೆಲಸ. ಆದುದರಿಂದ ಇಂತಹ ಉತ್ತಮ ಕಾರ್ಯಹಮ್ಮಿಕೊಂಡಿರುವ ಸಂಘಟಕರಿಗೆ ಅಭಿನಂದನೆಗಳು.

ದಂಬೆಕೋಡಿ ಹರೀಶರವರು : ಸಾರ್ವಜನಿಕರಿಗೆ ಇದು ಹೆಚ್ಚು ಪ್ರಯೋಜನಕಾರಿ ಕಾರ್ಯಕ್ರಮ. ವಧೂ ವರರಿಗೆ ಮತ್ತವರ ಪೋಷಕರಿಗೆ ಪರಸ್ಪರ ಸಂಪರ್ಕವೇರ್ಪಡಿಸಿಕೊಳ್ಳಲು ಈ ಕಾರ್ಯಕ್ರಮ ಸಹಕಾರಿಯಾಗುತ್ತದೆ. ಇದು ಕೇವಲ ಆದರ್ಶವಾಗದೆ ಪ್ರಯೋಗಿಕವಾಗಿ ಯಶಸ್ವಿಯಾಗಲಿ. ಅಂದರೆ ದೂರವಾಣಿ ಮೂಲಕ ಸಂಪರ್ಕವೇರ್ಪಡಿಸಿಕೊಂಡು ಈ ಕಾರ್ಯಕ್ರಮದಲ್ಲಿ ಭಾಗವಹಿಸಿದ ಅಭ್ಯರ್ಥಿಗಳೆಲ್ಲರೂ ನವ ಬಾಳಿನತ್ತ ಸಾಗಲಿ ಎಂದು ಹಾರೈಸುತ್ತೇನೆ.

**ಮೇರ್ಕಜೆ ವಿಶ್ವನಾಥ್‌ರವರು :** ನಾನು ಹಲವು ಜನರ ಬಳಿ ಈ ವಿಷಯವನ್ನು ಪ್ರಸ್ತಾಪಿಸಿದಾಗ ಅವರು ಅಸಡ್ಡೆ ತೋರಿ, ಕೀಳಾಗಿ ಮಾತನಾಡಿದರು. ಆದರೆ ಇಲ್ಲಿ ಬಂದು ಕಾರ್ಯಕ್ರಮ ನೋಡಿದ ಮೇಲೆ ನಿಜಕ್ಕೂ ಹೆಮ್ಮೆ ಯೆನಿಸುತ್ತದೆ. ಮದುವೆಯಾಗಿ ಗಂಡು ಹುಡುಕುವ ಕಷ್ಟ ತೆಗೆದುಕೊಳ್ಳುವ ಬದಲು ಇಲ್ಲಿ ಬಹಿರಂಗವಾಗಿ ಆಯ್ಕೆ ಮಾಡಲು ಅವಕಾಶ ದೊರೆಯುತ್ತದೆ, ಇದರ ಸದುಪಯೋಗ ಎಲ್ಲರೂ ಪಡೆದುಕೊಳ್ಳಬೇಕು.

**ಕಲ್ಲೆಂಬಿ ತಾರಾಗಣಪತಿ :** ಜನಾಂಗದ ಏಳಿಗೆಗೆ, ಸಂಸ್ಕೃತಿಯ ರಕ್ಷಣೆಗೆ, ಹಾಗೂ ಜನಸಂಘಟನೆಗೆ ಇಂತಹ ಕಾರ್ಯಕ್ರಮಗಳು ನಡೆಯಬೇಕು, ನಾಡಿನ ಮೂಲೆ ಮೂಲೆಯಿಂದ ವಧೂ-ವರರು ಇಲ್ಲಿಗೆ ಆಗಮಿಸಿರುವುದರಿಂದ ತಮಗಿಷ್ಟ ಬಂದವರನ್ನು ಆಯ್ಕೆ ಮಾಡಿಕೊಳ್ಳಬಹುದು.

**ಕುಟ್ಟನ ಜ್ಯೋತಿ :** ಯುವ ಜನತೆಗೆ ಇದೊಂದು ಒಳ್ಳೆಯ ಅವಕಾಶ ಒದಗಿಸುವ ಕಾರ್ಯಕ್ರಮ . ಅಲ್ಲಿ ಪ್ರತಿಯೊಬ್ಬರಿಗೂ ಮಾತನಾಡಲು ಹೆಚ್ಚು ಸಮಯಾವಕಾಶವನ್ನು ಕೊಟ್ಟಿದ್ದರೆ ಚೆನ್ನಾಗಿರುತ್ತಿತ್ತು. ನಮ್ಮ ನಮ್ಮ ಅರ್ಹತೆಗನುಗುಣವಾಗಿ ಮತ್ತು ಆಸಕ್ತಿಗನುಗುಣವಾಗಿ ಸೂಕ್ತ ಸಂಗಾತಿಯನ್ನು ಆಯ್ಕೆ ಮಾಡಿಕೊಳ್ಳಲು ಇಂತಹ ಕಾರ್ಯಕ್ರಮಗಳು ನಡೆಯುವುದು ಒಳ್ಳೆಯದು.

**ಕರಮನೆ ದೇಚಮ್ಮ :** ಪ್ರತಿಯೊಬ್ಬರಿಗೂ ಪರಸ್ಪರ ಭೇಟಿಗೆ ಈ ಕಾರ್ಯಕ್ರಮ ಅನುವು ಮಾಡಿಕೊಡುತ್ತದೆ. ಪ್ರತಿವರ್ಷವೂ ಇಂತಹ ಕಾರ್ಯಕ್ರಮ ನಡೆಯುವುದು ಒಳ್ಳೆಯದು.

**ತೆಕ್ಕಡೆ ವಾಣಿ ಕುಮಾರಿ :** ನಮ್ಮ ಜನ ಎಲ್ಲೆಲ್ಲಿದ್ದಾರೆ, ಯಾವ ಯಾವ ಕ್ಷೇತ್ರದಲ್ಲಿದ್ದಾರೆ ಎನ್ನುವುದನ್ನು ತಿಳಿದುಕೊಳ್ಳಬಹುದು. ನಮ್ಮ ಪೋಷಕರ ಸಮ್ಮುಖದಲ್ಲಿ ನಮಗಿಷ್ಟ ಬಂದವರನ್ನು ಆಯ್ಕೆ ಮಾಡಿಕೊಳ್ಳುವುದು ನಿಜಕ್ಕೂ, ಅಪೂರ್ವ ಕಾರ್ಯಕ್ರಮ.

**ಚೀಯಂಡಿ ಮೇನಕ :** ಇಲ್ಲಿ ಪರಸ್ಪರ ನೋಡಿಕೊಂಡು, ನಂತರ ನಮಗೆ ಬೇಕಾದವರನ್ನು ಆಯ್ಕೆ ಮಾಡಿಕೊಳ್ಳುವ ಅವಕಾಶ ಸಿಕ್ಕಿರುವುದು, ನನಗೆ ಅತೀವ ಸಂತಸ ತಂದಿದೆ.

– ಪಟ್ಟಡ ಶಿವಕುಮಾರ್, ಉಪನ್ಯಾಸಕ

---

### ನಗೆಹನಿಗ

ಗಿರಿ : ಎನ್‌ರ ಬಹಳ ಕುಷಿಲಿ ಒಳ

ಮನು : ಒಂದು ವಸ್ತು ತಕಂಡರೆ ಒಂದು ಫ್ರೀ ಅದಿಕ್ಕೆ

ಗಿರಿ : ಅದಿಕ್ಕೆ ನಿಂಗೆ ಎಂತಕೆರ ಅಷ್ಟು ಕುಷಿ

ಮನು : ಅಲ್ಲ ಅಕ್ಕನ ಮದುವೆ ಆದರೆ ತಂಗಿನ ಫ್ರೀ ಕೊಟ್ಟವೆಲ್ಲತ

– ಮುಕ್ಕಾಟೀರ ಶಿವಾನಂದ, ಮರಗೋಡು

---

ವಿಶ್ವದ ವೆಟಿಕನ್ ನಗರದಲ್ಲಿ ಎಲ್ಲರು ಪುರುಷರೇ, ಅಲ್ಲಿಯ ಜನ ಸಂಖ್ಯೆ **1000** ಮಾತ್ರ

# ಪಿ. ಟಿ. ಉಷಾಳಾಗುವ ಹಾದಿಯಲ್ಲಿ ಕೋಟೆಮನೆ ಕವಿತಾ ಬಿದ್ದಪ್ಪ

## ರಾಜ್ಯ ಮಟ್ಟದ ಸ್ಪರ್ಧೆಯಲ್ಲಿ ಚಿನ್ನದ ಪದಕ



ಪ್ರತಿಭೆಗೆ ಬಡತನ ಸಿರಿತನವೆಂಬ ಬೇಧವಿಲ್ಲ. ಮದೆನಾಡು ಮೂಲತಃ ಬಡನಾಡಲ್ಲ. ಒಂದು ಕಾಲದಲ್ಲಿ ಅತಿ ಹೆಚ್ಚು ಏಲಕ್ಕಿ ಬೆಳೆಯುತ್ತಿದ್ದು, ಏಲಕ್ಕಿಗೆ ಬೆಲೆಯೂ ಏರಿದ್ದಾಗ ಹಲವು ಕನಸುಗಳನ್ನು ಜೋಡಿಸಿ ಜುಮ್ಮನೆ ಜೀವನ ನಡೆಸಲು ಹೊರಟವರು ಇಲ್ಲಿನವರು. ಆದರೆ ಏಲಕ್ಕಿಗೆ, ಕಟ್ಟೆ ರೋಗ ಬಂದದ್ದೇ, ಇಲ್ಲಿನ ರೈತರ ಬೆನ್ನು ಮೂಳೆ ಮುರಿಯಿತು. ಜೊತೆಗೆ ಬೆಲೆಯೂ ಕುಸಿದು ರೈತ ಕಂಗೆಟ್ಟು ಹೋದ. ಮತ್ತೊಂದು ಕಡೆ ಕಾಫಿ, ಕರಿಮೆಣಸುಗಳ ಬೆಲೆ ಹೆಚ್ಚಾಗುತ್ತಿದ್ದಂತೆ ಮದೆನಾಡಿನ ಜನರನ್ನ ಮಾತಾಡಿಸುವವರೇ ಇಲ್ಲದಾದರು. ಆದರೆ ಈಗ ಕಾಲ ಬದಲಾಗಿದೆ. ಕಾಫಿ, ಕರಿಮೆಣಸುಗಳ ಕಾಲ ಮುಗಿಯತೊಡಗಿದೆ. ಏಲಕ್ಕಿ ಬೆಳೆಯಿಲ್ಲದಿದ್ದರೂ, ಬೆಲೆ ಏರತೊಡಗಿ ಮದೆನಾಡಿನವರ ಮುಖದಲ್ಲಿ ಮಂದಹಾಸ ಮೂಡುತ್ತಿದೆ. ಆದರೂ ಬಡವರ ಬವಣೆಯಂತೂ ಇಲ್ಲಿ ಮುಗಿಯಲಿಲ್ಲ, ಬವಣೆಯ ನಡು ನಡುವೆ ಬದುಕಿಗಾಗಿ ಹುಡುಕುತ್ತಿರುವವರು ಹಲವರು. ಈ ಬದುಕಿನ ನಾಗಾಲೋಟದಲ್ಲಿ ಯಶ ಕಂಡವಳು ಕೊಡಗಿನ ಹೆಮ್ಮೆಯ ಕೋಟೆಮನೆ ಕವಿತಾ ಬಿದ್ದಪ್ಪನವರು. ಮದೆನಾಡು ಹಲವು ಪ್ರತಿಬೆಗಳಿಗೆ ಆಶ್ರಯ ನೀಡಿದೆ. ಗೌಡ ಜನಾಂಗದಲ್ಲಿ ವೈದ್ಯರು, ಇಂಜಿನೀಯರುಗಳು ಈ ನಾಡಿನಿಂದ ಹೊರ ಹೊಮ್ಮಿದ್ದಾರೆ. ಹುಲಿಮನೆ ಮಂಜುಳಾ, ಹುದೇರಿ ತ್ಯಾಗರಾಜೇಂದ್ರರಂತಹ ಕ್ರೀಡಾ ಪಟುಗಳನ್ನು ಈ ನಾಡು ನೀಡಿದೆ. ಈಗ ಕೋಟೆಮನೆ ಕವಿತಾ ಬಿದ್ದಪ್ಪನವರು ರಾಜ್ಯಮಟ್ಟದ ಗುಡ್ಡಗಾಡು ಓಟದ ಸ್ಪರ್ಧೆಯಲ್ಲಿ ಚಿನ್ನದ ಪದಕವನ್ನು ಪಡೆಯುವುದರೊಂದಿಗೆ ಮದೆನಾಡಿನ ಕೀರ್ತಿಯ ಮುಡಿಗೆ ಮತ್ತೊಂದು ಗರಿಯನ್ನು ಮೂಡಿಸಿದ್ದಾಳೆ.

ಮದೆನಾಡಿನ ಕೋಟೆಮನೆ ಬಿದ್ದಪ್ಪ ಮತ್ತು ರತಿ ದಂಪತಿಗಳ ಪ್ರಥಮ ಪುತ್ರಿಯಾಗಿರುವ ಈಕೆ ಬೆಂಗಳೂರಿನಲ್ಲಿ ನಡೆದ ಬಾಲಕಿಯರ ಆರುಸಾವಿರ ಮೀಟರ್ ಓಟದ ಸ್ಪರ್ಧೆಯಲ್ಲಿ ಪ್ರಥಮವಾಗಿ ಹೆಜ್ಜೆ ಹಾಕಿ ಚಿನ್ನದ ಪದಕ ಪಡೆದುಕೊಂಡಿದ್ದಾಳೆ. ಬೆಂಗಳೂರಿಗೆ ತಲುಪಿದ ದಿನವೇ ಓಡಿದ ಐದು ಸಾವಿರ ಮೀಟರ್ ಓಟದ ಸ್ಪರ್ಧೆಯಲ್ಲಿಯೂ ಈಕೆ ಮೂರನೇ ಸ್ಥಾನ ಪಡೆದು ಕಂಚಿನ ಪದಕ ಪಡೆದುಕೊಂಡಿದ್ದಾಳೆ. ಒಂದು ವೇಳೆ ಆಕೆಗೆ ವಿಶ್ರಾಂತಿ ಸಿಕ್ಕಿರುತ್ತಿದ್ದರೆ, ಎರಡು ಚಿನ್ನ ಅವಳ ಪಾಲಿಗಿರುತ್ತಿತ್ತು.

ಚಿಕ್ಕಂದಿನಿಂದಲೂ ಓಟದ ಗೀಳು ಅಂಟಿಸಿಕೊಂಡಿರುವ ಕವಿತಾರವರು ಸ್ಥಳೀಯ ಮಟ್ಟದ ಕ್ರೀಡಾಕೂಟಗಳಲ್ಲಿ ಹಲವು ಬಹುಮಾನಗಳನ್ನೂ ಗಳಿಸಿಕೊಂಡಿದ್ದಾಳೆ. ಹತ್ತನೆ ತರಗತಿಯಲ್ಲಿ ಓದುತ್ತಿದ್ದಾಗ ಗೋಣಿಕೊಪ್ಪದಲ್ಲಿ ರೋಟರಿ ಕ್ಲಬ್ ಆಶ್ರಯದಲ್ಲಿ ನಡೆದ ಸ್ಪರ್ಧೆಯಲ್ಲಿ ಪ್ರಥಮ ಸ್ಥಾನ ಪಡೆದ ಈಕೆಗೆ, ಬಹುಮಾನದ ಜೊತೆಗೆ, ಕ್ರೀಡಾ ವಸ್ತ್ರ (ಟ್ರ್ಯಾಕ್ ಸೂಟ್) ವು ಸಿಕ್ಕಿತು. ಇದನ್ನು ಬಿಟ್ಟರೆ ಈಕೆಗೆ ಕ್ರೀಡೆಯಲ್ಲಿ ಬಳಸಬೇಕಾದ ಯಾವ ಕ್ರೀಡಾ ಸಲಕರಣೆಯೂ ಇಲ್ಲ. ಬರಿಗಾಲಿನಲ್ಲೆ, ಬಾಣೆಯಲ್ಲಿ ಕಲ್ಲು ದಾರಿಯಲ್ಲಿ ಓಡಿ ಅಭ್ಯಾಸ ಮಾಡುತ್ತಿರುವ ಈಕೆ ನಿಜಕ್ಕೂ ಕಠಿಣ ಪರಿಶ್ರಮಿಯೇ ಹೌದು.

ಪ್ರಸ್ತುತ ಮದೆ ಮಹೇಶ್ವರ ಪದವಿ ಪೂರ್ವ ವಿದ್ಯಾಲಯದಲ್ಲಿ ಪ್ರಥಮ, ಪಿ. ಯು. ಸಿ. ಓದುತ್ತಿರುವ ಈಕೆಗೆ ಇವಳಮ್ಮನದೇ ಮೊದಲ ಪ್ರೋತ್ಸಾಹ. ಗುರುಗಳೆಲ್ಲರೂ ಸಹ ನನಗೆ ಪ್ರೋತ್ಸಾಹ ಮತ್ತು ಮಾರ್ಗದರ್ಶನ ಮಾಡುತ್ತಿದ್ದಾರೆಂದು ಹೆಮ್ಮೆಯಿಂದ ನೆನೆಯುತ್ತಾಳೆ. ಮುಂದಿನ ಗುರಿಯೇನು? ಎಂಬ 'ಸಂಗಾತಿ' ಯ ಪ್ರಶ್ನೆಗೆ, ಮುಂದೆ ರಾಷ್ಟ್ರ ಮಟ್ಟದಲ್ಲಿ ಓಡಿ ಪ್ರಥಮ ಸ್ಥಾನ ಪಡೆಯಬೇಕೆಂದಿರುವೆ, ಆಗ ನನಗೆ ಹಾಸ್ಟೆಲ್ ಸೌಲಭ್ಯ ಸಿಕ್ಕಿದರೆ ಮುಂದೆ ಕ್ರೀಡೆ ಮತ್ತು ಓದಿನಲ್ಲಿ ಯಶಸ್ಸು ಸಾಧಿಸಬೇಕೆಂದು ಆಕೆ ಆಶಯ ವ್ಯಕ್ತ ಪಡಿಸುವಾಗ ಆಕೆಯ ಮುಖದಲ್ಲಿ ಛಲದ ಕೆಚ್ಚು ಹಾದೂ ಹೋಗುತ್ತದೆ. ಹೌದು ಆಕೆಗೆ ಸೌಲಭ್ಯಗಳ ಕೊರತೆಯಿದೆ. ಕನಿಷ್ಠ ಸೌಲಭ್ಯಗಳು ಲಭ್ಯವಿಲ್ಲದೆ ಅಷ್ಟೊಂದು ಸಾಧನೆಗೈದವಳು. ಸೌಲಭ್ಯ ಲಭಿಸಿದರೆ ಪಿ. ಟಿ. ಉಷಾಳ ಸಾಧನೆಯನ್ನೂ ಈಕೆ ಹಿಂದಿಕ್ಕುವಲ್ಲಿ ಸಂಶಯವಿಲ್ಲ. ಪಿ. ಟಿ. ಉಷಾಳೇ ಇತ್ತೀಚೆಗೆ ಸುಳ್ಯದಲ್ಲಿ 'ನಮ್ಮ ಕ್ರೀಡಾಳುಗಳಲ್ಲಿ ಸೀಮಿತ ಗುರಿಯಿರುವುದರಿಂದ ಅವರು ಮುಂದುವರಿಯುತ್ತಿಲ್ಲ' ಎಂಬ ಅಭಿಪ್ರಾಯ ವ್ಯಕ್ತ ಪಡಿಸಿದ್ದರು. ಆದರೆ ಕವಿತಾಗೆ ಸೀಮೆ ಮೀರಿದ ಗುರಿಯಿದೆ. ಆ ಗುರಿ ಈಡೇರಿಸಲು ಈ ಭಾವೀ ಒಲಂಪಿಕ್ ರಾಣಿಗೆ ಕೇವಲ ಪ್ರೋತ್ಸಾಹದ ಮಾತುಗಳು ಅಲ್ಲಾ, ನಮ್ಮ ಜನಾಂಗದ ನಾಯಕರು, ಸಂಘ ಸಂಸ್ಥೆಗಳು, ನೆರವು ಮತ್ತು ಅವಕಾಶಗಳೆರಡನ್ನೂ ಒದಗಿಸಿ ಪೋಷಿಸಲೆಂಬುದು ಸಂಗಾತಿಯ ಬಯಕೆ.

– ಪಟ್ಟಡ ಶಿವಕುಮಾರ್, ಉಪನ್ಯಾಸಕ

ಕೊಡಗು ಸಂಗಾತಿ, ಪಾಕ್ಷಿಕನ್ನ ತಕ್ಕಂಡೊದಕು

ವಿಶ್ವದಲ್ಲಿ ಎಲ್ಲದಕ್ಕೂ ದೊಡ್ಡ ಸ್ಟೇಡಿಯಂ ಪ್ರಾಗ್‌ನ ಎಸ್ಟ್ರಾಹೀವ ಸ್ಟೇಡಿಯಂ

# ನಿರುದ್ಯೋಗಿಗಳಿಗೊಂದು ಕಿವಿಮಾತು

ಜೀವನದಲ್ಲಿ ನಮಗೆ ಬೇಕಾಗುವ ಅವಶ್ಯಕತೆಗಳ್ನು ಹಣ ಪೂರೈಸುತ್ತದೆ. ಹಣ ಗಳಿಸಲು ನಾವು ಏನು ಮಾಡಬೇಕು? ಚಿಕ್ಕಂದಿನಿಂದ ನಮ್ಮ ಪೋಷಕರು, ಪ್ರಾಧ್ಯಾಪಕರು ನಮಗೆ ಹೇಳುತ್ತಾ ಬಂದಿದ್ದಾರೆ. ಹಣ ಸಂಪಾದಿಸಲು ಒಂದೇ ಮಂತ್ರ- 'ಚೆನ್ನಾಗಿ ಓದಬೇಕು, ಒಳ್ಳೆಯ ಅಂಕ ಪಡೆದು ಉತ್ತಮ ದರ್ಜೆಯಲ್ಲಿ ತೇರ್ಗಡೆಯಾಗಿ ಒಳ್ಳೆಯ ಕೆಲಸ ಗಿಟ್ಟಿಸಬೇಕು' ಈ ಸೂತ್ರವನ್ನ ಅನುಸರಿಸಿದರೆ, ಕೈ ತುಂಬಾ ಸಂಬಳ ಪಡೆಯುತ್ತಾ ಜೀವನವನ್ನು ಹಾಯಾಗಿ ಕಳೆಯಬಹುದು! ಈ ಸಂಗತಿ ಸತ್ಯಕ್ಕೆ ಹತ್ತಿರವಾದದ್ದಾರೂ ಎಷ್ಟೊಂದು ಅಸಂಬದ್ಧ.

ಮನುಷ್ಯನಿಗೆ ವಿದ್ಯೆ ಮುಖ್ಯ ನಿಜ, ಆದರೆ ಹಣ ಮಾಡಲು ಬೇಕಾಗಿರುವುದು ಶಾಲಾ-ಕಾಲೇಜುಗಳ ಸರ್ಟಿಫಿಕೇಟುಗಳಲ್ಲ- ವ್ಯವಹಾರ ಜ್ಞಾನ. ನಮಗೆ ಶಾಲೆಯಲ್ಲಿ ಹಣ ಹೇಗೆ ಗಳಿಸುವುದು ಎಂದು ಯಾರೂ ಹೇಳಿ ಕೊಡುವುದಿಲ್ಲ. ಲೋಕದಲ್ಲಿರುವ ಎಲ್ಲಾ ತಂದೆ- ತಾಯಂದಿರು "ವಿದ್ಯೆ-ಹೆಚ್ಚಿನ ಅಂಕ ಒಳ್ಳೇ ಸರ್ಕಾರಿ ಕೆಲಸ- ಆರಾಮ ಜೀವನ" ಈ ತಂತ್ರವನ್ನೇ ಪಾಲಿಸುತ್ತಾ, ಮಕ್ಕಳಿಗೆ ಅದನ್ನೇ ಬೋಧಿಸುತ್ತಾ ಬಂದಿದ್ದಾರೆ. ಇದರಿಂದಾಗಿ ವಿಧ್ಯಾರ್ಜನೆಗಾಗಿ ಪೈಪೋಟಿ, ಸರ್ಕಾರೀ ಉದ್ಯೋಗದ ಬರ, ಪರಿಣಾಮವಾಗಿ ಸಹಸ್ರಾರು ನಿರುದ್ಯೋಗಿಗಳು. ಇಷ್ಟೊಂದು ಪೈಪೋಟಿ ಇರುವಾಗ ಎಷ್ಟು ಮಂದಿಗೆ ಸರ್ಕಾರೀ ಕೆಲಸದ ರಕ್ಷಾ ಕವಚ ಲಭ್ಯವಾಗುತ್ತದೆ. ಅಲ್ಲದೆ, ಪಾಠಗಳಲ್ಲಿ ಪ್ರತಿಭೆಯಿಲ್ಲದ ಅಥವಾ ಬಡ ಮಕ್ಕಳ ಪಾಡೇನು?

ವಿದ್ಯಾವಂತ ಮಂದಿ ಕಷ್ಟಪಟ್ಟು ಅಥವಾ ಅದೃಷ್ಟದಿಂದಲೋ ಸರ್ಕಾರೀ ಕೆಲಸ ಸೇರಿಕೊಂಡರೆ ಅವರಿಗೆ ಸಿಗುವ ಭತ್ಯೆ ಅಷ್ಟಕಷ್ಟೆ. ನಾನಾ ತೆರಿಗೆಗೆಳನ್ನು ಕಳೆದು ನಂತರ ಕೈಗೆ ಸಿಗುವ ಹಣ ಮಧ್ಯಮ ವರ್ಗದ ಜೀವನ ಸಾಗಿಸಲಷ್ಟೇ ಸೀಮಿತವಾಗಿರುತ್ತದೆ. ಒಂದೇ ಒಂದು ತಿಂಗಳು ಸಂಬಳ ನಿಂತರೆ, ಸಂಸಾರ ಸಾಗಿಸುವುದು ದುರ್ಬರ. ಅದಲ್ಲದೆ, ಸರ್ಕಾರಿ ನೌಕರನ ಕ್ರಿಯಾಶೀಲತೆ ಸತ್ತು ಹೋಗುತ್ತದೆ. 9ರಿಂದ 6 ರ ವರೆಗೆ ಖೈದು ಮಾಡಿಡುವ ನೌಕರಿ ಬೇರೆ ಯಾವ ಚಟುವಟಿಕೆಗಳಿಗೂ ಅವಕಾಶವಿಲ್ಲದಂತೆ ಮಾಡುತ್ತದೆ. ಇದನ್ನು ಕೂಲಂಕುಷವಾಗಿ ವಿಶ್ಲೇಷಿಸಿದಾಗ ನಮ್ಮೆದುರಿಗೆ ಕವಲುದಾರಿ ಎದುರಾಗುತ್ತದೆ. ಒಂದು - ಓದಿ, ಕಷ್ಟಪಟ್ಟು ಸರ್ಕಾರಿ ಕೆಲಸ ಅಥವಾ ಖಾಸಗೀ ಕೆಲಸಕ್ಕೆ ಸೇರಲು ಪ್ರಯತ್ನಿಸುವುದು. ಎರಡು- ಸ್ವಂತವಾಗಿ ಏನಾದರೂ ಕೆಲಸದಲ್ಲಿ ತೊಡಗಿ 'ನೌಕರ' ನ ಬದಲಾಗಿ ತಾನೇ ನಾಲ್ಕಾರು ಮಂದಿಗೆ 'ಬಾಸ್' ಆಗುವುದು.

Robert Frost ಎಂಬ ಆಂಗ್ಲ ಕವಿ 1916 ರಲ್ಲಿ ಬರೆದ 'The Road Not taken' ಎಂಬ ಪದ್ಯ ಬಹಳ ಅರ್ಥಪೂರ್ಣ. ಜೀವನದ ಪ್ರತಿಯೊಂದು ಘಟ್ಟದಲ್ಲಿ ನಾವು ಹಲವಾರು ಕವಲು ದಾರಿಯಲ್ಲಿ ನಿಂತು ಗೊಂದಲಕ್ಕೀಡಾಗುತ್ತೇವೆ. ಸುರಕ್ಷಿತವಾದ ಸಾಮಾನ್ಯರು ಓಡಾಡುವ ದಾರಿಯಲ್ಲಿ ನಡೆಯಲು ಆಕರ್ಷಿತರಾಗುವುದು ಸಹಜ. ' Taking the road not taken makes all the difference' ಯಾರು 2ನೇ ಕಷ್ಟಕರ, ಅನಿಶ್ಚಿತ ದಾರಿಯನ್ನು ಆಯ್ದುಕೊಳ್ಳುತ್ತಾರೋ ಅವರು ರೋಮಾಂಚಕಾರಿಯಾದಂತಹ ಸಫಲತೆಯನ್ನು ಕಂಡುಕೊಳ್ಳಲು ಸಾಧ್ಯ. ಆದರೆ ಅದಕ್ಕೆ, ಸಾಧಿಸಿಯೇ ತೀರಬೇಕೆಂಬ ಛಲ ಹಾಗೂ ಅವಿರತ ಉತ್ಸಾಹ ಅತ್ಯಗತ್ಯ. ಎರಡನೆಯ ದಾರಿ ಸೋಮಾರಿಗಳಿಗೆ ಹಾಗೂ ನಿರಾಶವಾದಿಗಳಿಗಲ್ಲ. ಸೋಲಿನಿಂದ ಕುಗ್ಗದೆ, ಪ್ರತಿಸರ್ತಿ ಸೋತಾಗ ಅದರಿಂದ ಪಾಠ ಕಲಿತು ಮತ್ತೆ ಪ್ರಯತ್ನ ಮಾಡುವ ಹುರುಪು ತೋರಿದರೆ ಅಸಾಮಾನ್ಯವಾದುದನ್ನು ಸಾಧಿಸಬಹುದು.

Robert T. Kiosaki' ಅಮೆರಿಕಾದ ಬಿಲಿಯನೇರ್‌ಗಳಲ್ಲಿ ಒಬ್ಬ. ಈತ ಬರೆದಿರುವ 'Rich Dad Poor Dad' ಎಂಬ ಪುಸ್ತಕದಲ್ಲಿ ಶಾಲಾ ವ್ಯಾಸಂಗದ ಮೊರೆ ಹೋಗದೆ ಅಪಾರ ಹಣ ಮಾಡುವುದು ಹೇಗೆ ಎಂಬುದನ್ನು ವಿವರಿಸಿದ್ದಾನೆ:

- ಆತನ ಪ್ರಕಾರ ಶಾಲೆಗಳು ಒಳ್ಳೆಯ ಉದ್ಯೋಗಿಗಳನ್ನು ಸೃಷ್ಟಿ ಮಾಡುತ್ತದೆಯೇ ಹೊರತು, ಒಳ್ಳೇಯ ಮಾಲೀಕರುಗಳನ್ನಲ್ಲ.

- ಬಡವ-ಬಡವನಾಗಿಯೇ ಉಳಿಯಲು ಕಾರಣ, ಆತ ಮಾಲೀಕನನ್ನು ಸಾಹುಕಾರನಾಗಿಸಲು ದುಡಿಯುತ್ತಾನೆ. ಆದರೆ ಸಾಹುಕಾರ ಹಣದ ಬಲದಿಂದ ಬುದ್ಧಿವಂತರನ್ನು ಕೆಲಸಕ್ಕಿಟ್ಟುಕೊಂಡು ದುಡಿಸುತ್ತಾನೆ.

- ದೇವರು ಪ್ರತಿಯೊಬ್ಬ ಮನುಷ್ಯನಿಗೂ ಬುದ್ಧಿಶಕ್ತಿ ಹಾಗೂ ಪ್ರತಿಭೆಯನ್ನು ಕರುಣಿಸಿದ್ದಾನೆ. ಆ ಪ್ರತಿಭೆಯನ್ನು ರೂಢಿಸಿಕೊಂಡು ಕೀರ್ತಿ ಹಾಗೂ ಹಣ ಗಳಿಸಲು ಪ್ರಯತ್ನ ಮಾಡಬೇಕು.

- "ನೀವು ಕಷ್ಟಪಟ್ಟು ಲಕ್ಷ ಸಾಕಿರಿ ಆ ನಂತರ ಲಕ್ಷ ನಿಮ್ಮನ್ನು ಸಾಕುತ್ತದೆ" ಎಂಬಂತೆ ಕೂಡಿಟ್ಟ ಹಣವನ್ನು ಉಪಯುಕ್ತವಾದ ಲಾಭದಾಯಕ ಯೋಜನೆಗಳಲ್ಲಿ ತೊಡಗಿಸಿದರೆ ಹಣ ದ್ವಿಗುಣಗೊಳ್ಳುತ್ತದೆ.

- ಲಾಭ ತರುವಂತಹ ಯೋಜನೆಗಳೆಂದರೆ- ಬಾಂಡ್‌ಗಳು, ಸ್ಟಾಕ್ ವಿವಿಧ ರೀತಿಯ Mutual Fund, ರಿಯಲ್ ಎಸ್ಟೇಟ್, ಹಾಗೂ ರಾಯಲ್ಟಿಗಳು.

- ಸ್ವ-ಸಂದೇಹವನ್ನು ತೊರೆದುಹಾಕಿ ಅಪಾಯವನ್ನೆದುರಿಸುವ ಗಟ್ಟಿ ಮನಸ್ಸು ಮಾಡಬೇಕು. ಅಕಸ್ಮಾತ್ ನಮ್ಮ ಲೆಕ್ಕಚಾರ ತಪ್ಪಿ ತೊಡಗಿಸಿದ ಹಣ ನಷ್ಟವಾಗಬಹುದು. ಆ ಸೋಲಿನಿಂದ ಕಲಿತ ಪಾಠವನ್ನು ಮನದಟ್ಟು ಮಾಡಿಕೊಂಡು ಮರು ಪ್ರಯತ್ನ ಪಡಬೇಕು.

- 'ಪ್ರೀತಿಸಿದವರೆಲ್ಲಾ ವಿರಹವೇದನೆಯನ್ನನುಭವಿಸುತ್ತಾರೆ' ಹಾಗೆಯೇ ಹಣವಂತರೆಲ್ಲಾ ನಷ್ಟದ ವೇದವೆಯನ್ನನುಭವಿಸಿಯೇ ಅಭಿವೃದ್ಧಿ ಹೊಂದಿರುತ್ತಾರೆ. ಸ್ವರ್ಗಕ್ಕೆ ಹೋಗಲು ಇಷ್ಟ, ಆದರೆ ಸಾಯಲು ಭಯ ಎಂದರೆ ಆಗುತ್ತದೆಯೇ?

ಪಾಪ್ ಗಾಯಕಿ ಮಡೋನಾ, ಪಾಪ್ ಸ್ಟಾರ್ ಮೈಕಲ್ ಜಾಕ್‌ಸನ್, ಬಿಲಿಯನೇರ್ ಬಿಲ್‌ಗೇಟ್ಸ್ ಇವರೆಲ್ಲಾ ಹೆಚ್ಚಿಗೆ ಓದಿದವರಲ್ಲ. ಅಷ್ಟು ದೂರ ಯಾಕೆ? ನಮ್ಮೆಲ್ಲರ ನೆಚ್ಚಿನ ಕ್ರಿಕೆಟ್ ಪಟು ಸಚಿನ್‌ತೆಂಡೂಲ್ಕರ್ ಹಾಗೂ ಸಿನಿಮಾ ನಟ ಆಮೀರ್‌ಖಾನ್ ಇಬ್ಬರೂ ಕಾಲೇಜ್ ಮೆಟ್ಟಿಲು ಹತ್ತಿದವರಲ್ಲವಾದರೂ ಕೋಟಿಗಟ್ಟಲೆ

**20ನೇ ಪುಟಕ್ಕೆ**

ವಿಶ್ವದಲ್ಲಿ ಎಲ್ಲಕ್ಕೂ ಉದ್ದವಾದ ಸುರಂಗ ಮಾರ್ಗ ಮೌಂಟ್ ಬ್ಲಾಂಕ್, ಫ್ರಾನ್ಸ್‌ದಿಂದ ಇಟಲಿ ತನಕ – 72 ಮೈಲು.

# ಮೂಳೆ ತಜ್ಞರಾಗಿ - ನಾಟಿ ವೈದ್ಯರಾಗಿ ಕೀರ್ತಿ ಗಳಿಸಿದ ಕರೆಮನೆ ಪೂವಯ್ಯ



ಕರೆಮನೆ ಪೂವಯ್ಯ ನಾಟಿವೈದ್ಯರು ಹಾಗೂ ಮೂಳೆ ತಜ್ಞರಾಗಿ ಜನಸೇವೆಯಲ್ಲಿ ತೊಡಗಿದ ಮಹಾತ್ಮರು. ಪಿರಿಯಪಟ್ಟಣ ತಾಲ್ಲೂಕಿನ ಕೋಗಿಲವಾಡಿ ಗ್ರಾಮ. ಇವರು 1940 ನೇ ಇಸವಿಯಲ್ಲಿ ಜನಿಸಿದವರು. ಇವರು ಬಾಲ್ಯದಲ್ಲಿ ಓದಿನಲ್ಲೂ ಆಟೋಟ ಕ್ರೀಡೆಗಳಲ್ಲೂ ಮುಂದಿದ್ದರು. ಹಾಗಾಗಿ ಎಸ್. ಎಸ್. ಎಲ್. ಸಿ. ಓದಿನ ಜೊತೆಗೆ N.C.C. ಯಲ್ಲೂ ಲೀಡರ್, ಆಗಿ ಮೂರು ವರ್ಷ ತರಬೇತಿಯನ್ನು ಪಿರಿಯಾಪಟ್ಟಣ Govt. Highಸ್ಕೂಲಿನಲ್ಲಿ ಪಡೆದಿದ್ದಾರೆ.

ಮೂಳೆ ಮುರಿದಿದ್ದರೆ, ಕೀಲು ಜಾರಿದ್ದರೆ, ನರ ಹೊರಳಿದ್ದರೆ, ಸರಿ ಮಾಡಿ ನಾಟಿ ಔಷಧಿ ಹಚ್ಚಿ ಸರಿ ಮಾಡುತ್ತಾರೆ. ಜಾಂಡೀಸ್‌ಗೆ, ಬಿಳಕಡ್ಡಿಗೆ, ದಮ್ಮು ಹಾಗು ವಾಯು ರೋಗಕ್ಕೆ, ಕಣ್ಣು ಪೊರೆ ಮತ್ತು ಉಷ್ಣ ಖಾಯಿಲೆಗೆ, ಹಾಗೂ ದನಗಳಿಗೆ ಬರುವಂತಹ ಖಾಯಿಲೆಗಳಿಗೂ ಔಷಧಿಯನ್ನು ತಯಾರು ಮಾಡಿ ಕೊಟ್ಟು, ಗುಣ ಪಡಿಸುತ್ತಾರೆ. ಇದರಿಂದ ಅನೇಕಾನೇಕ ಜನರು ಗುಣಮುಖ ರಾಗಿದ್ದಾರೆ. ಇದನ್ನೆಲ್ಲಾ ಜನರು, ಹಾಗೂ ಸರಕಾರದವರು ಗುರುತಿಸಿ ಇವರಿಗೆ ಹಲವಾರು ಸನ್ಮಾನ ಹಾಗೂ ಪ್ರಶಸ್ತಿಯನ್ನು ಕೊಟ್ಟಿರುವುದು ಹೆಮ್ಮೆಯ ವಿಷಯ. ಜನವರಿ ತಾ. 5-1-2001 ರಂದು ಕೋಗಿಲವಾಡಿ ಗ್ರಾಮದವರು ಊರಿನ ವಾರ್ಷಿಕ ಶಿಬಿರದ ದಿವಸ ಸನ್ಮಾನಿಸಿ. ಎರಡನೆಯದಾಗಿ ಪಿರಿಯಾಪಟ್ಟಣ ಅರಣ್ಯ ಅಧಿಕಾರಿವತಿಯಿಂದ ಜನವರಿ 26, 2001 ರಲ್ಲಿ ಪುರಸ್ಕಾರ ನೀಡಿ ಸನ್ಮಾನಿಸಲ್ಪಟ್ಟಿತು. ಅದೇ ದಿವಸ ಕೊಡಗು ಗೌಡ ಸಮಾಜ ಪಿರಿಯಾಪಟ್ಟಣ ವತಿಯಿಂದ ಪ್ರಶಸ್ತಿ ಹಾಗೂ ಸನ್ಮಾನವನ್ನು ಪಡೆದಿರುತ್ತಾರೆ. ಇದಾದ ನಂತರ ಫೆಬ್ರವರಿ ತಾ 16, 2001 ರಂದು ಮೈಸೂರಿನ ಜೆ. ಎಸ್. ಎಸ್. ಆಸ್ಪತ್ರೆಯವರ ವತಿಯಿಂದ ಪ್ರಶಸ್ತಿ ಪತ್ರ ಹಾಗೂ ಸನ್ಮಾನ ನೀಡಿ ಸತ್ಕರಿಸಿದ್ದು ನಂಬಲಸಾಧ್ಯ.

ಈ ಮೇಲಿನ ಪುರಸ್ಕಾರವು ಸಾಮಾನ್ಯ ರೈತನಾಗಿದ್ದ ಹೆಚ್ಚಿನ ವಿದ್ಯಾಭ್ಯಾಸವಿಲ್ಲದೆ ಇದ್ದಂತಹ ಒಬ್ಬ ನಾಟಿ ವೈದ್ಯನಿಗೆ ಸಿಗಬೇಕಾದರೆ ಆ ವ್ಯಕ್ತಿಯ ವ್ಯಕ್ತಿತ್ವ, ಹಾಗೂ ಆತನ ಮನೋಭಾವವನ್ನು ಅರಿಯಲು ನಿಜವಾಗಲೂ ಯಾವ ಅಳತೆ ಗೋಲು ಇರುವುದಿಲ್ಲ.

ಶ್ರೀಯುತ ಪೂವಯ್ಯನವರಿಗೆ ಈ ವಿದ್ಯೆಯು ತನ್ನಿಂದ ತಾನಾಗಿ ಅದೃಷ್ಟವಶಾತ್ ಬಂದಿರುವಂತದಲ್ಲ. ಇದು ಹಿರಿಯರಿಂದ ಬಂದ ಬಳುವಳಿಯಾಗಿದೆ. ಇವರ ನಿಸ್ವಾರ್ಥ ಸೇವಾ ಮನೋಭಾವ, ಕಷ್ಟದವರ ನೋವಿಗೆ ಸ್ಪಂದಿಸಿ ತನ್ನ ಬಾಳನ್ನು ಮುಡಿಪಾಗಿಟ್ಟು ರೋಗಿಗಳ ಸೇವೆ ಮಾಡುವಂತಹ ಕೈಂಕರ್ಯವನ್ನು ಎಲ್ಲರು ಮಾಡಲು ಸಾಧ್ಯವಿರುವುದಿಲ್ಲ.

ಇವರ ಚಿಕಿತ್ಸೆಯ ಕ್ರಮವು ತಾತನಿಂದ ತಂದೆಗೆ, ತಂದೆಯಿಂದ ಮಗನಿಗೆ ಬಳುವಳಿಯಾಗಿ ಬಂದಂತಹದ್ದು. ಇವರ ತಂದೆಯಿಂದ ಈಗ ಮೂರನೆ ಮಗನಾದ ಪೂವಯ್ಯನಿಗೆ ಪ್ರಾಪ್ತವಾಯ್ತು. ಈ ತರಹದ ವಿದ್ಯೆಯನ್ನು ಎಲ್ಲಿಯಾದರು ಕಲಿಯಲು ಸಾಧ್ಯವಿಲ್ಲ. ಕಲಿತು ಜನರ ಸೇವೆ ಮಾಡಲು ಸಾಧ್ಯವಿರುವಂತದ್ದಲ್ಲ. ಇಂತಹ ಚಿಕಿತ್ಸಾ ಪದ್ಧತಿಯು, ವ್ಯಕ್ತಿಯ ತ್ಯಾಗಮಯ, ಹಾಗೂ ಸಹನೆಯ ಅನುಕಂಪದ ಮನೋಭಾವ ಇರತಕ್ಕಂತಹ ವ್ಯಕ್ತಿಗಳಿಗೆ ಮಾತ್ರ ಈ ವೈದ್ಯಕೀಯ ಚಿಕಿತ್ಸೆ ಫಲಪ್ರದವಾಗುವುದು. ಕೊಡಗು ಸಂಗಾತಿ ಇವರ ಮನದಾಳವನ್ನು ಕೆದಕಿದಾಗ ಇವರ ಅಭಿಪ್ರಾ.ವನ್ನು ಈ ರೀತಿ ತೋಡಿಕೊಂಡರು.

ಇದೂವರೆಗೂ ಈ ವೃತ್ತಿಯು ವಂಶ ಪಾರಂಪರೆಯಾಗಿ ಬಂದಿರುವುದು. ಆದರೂ ಬೇರೆ ಯಾರಾದರೂ ಈ ವೃತ್ತಿಯನ್ನು ಕಲಿತುಕೊಳ್ಳಬೇಕೆಂಬ ಅಭಿಮಾನದಿಂದ ನಿರ್ವಂಚನೆ ಮತ್ತು ಪರಿಶ್ರಮ ಪಡುವಂತಹವರು ಬಂದು ಕೇಳಿಕೊಂಡರೆ ಅವರಿಗೆ ಈ ವಿದ್ಯೆಯನ್ನು ಹೇಳಿಕೊಡುತ್ತೇನೆ. ಈ ವೃತ್ತಿಯು ನನ್ನ ಆಯಸ್ಸಿಗೆ ಕುಂಠಿತವಾಗಬಾರದು. ಇದನ್ನು ಉಳಿಸಿ, ಬೆಳೆಸಿ, ಪ್ರೋತ್ಸಾಹಿಸಿ ಅಭಿವೃದ್ಧಿ ಪಡಿಸಿಕೊಂಡು ಹೋಗುವಂತಹವರಾಗ ಬೇಕೆಂದು ತಮ್ಮ ಮನದಾಸೆಯನ್ನು ನಿವೇದಿಸಿಕೊಂಡರು.

ಈ ವೃತ್ತಿಗೆ ಬೇಕಾಗಿರತಕ್ಕಂತಹ ಮುಖ್ಯವಾದ ಗಿಡ ಮೂಲಿಕೆಗಳು ಸುತ್ತಮುತ್ತಲಿನ ಕಾಡುಗಳಲ್ಲಿ ಸಾಮಾನ್ಯವಾಗಿ ಸಿಗುತ್ತದೆ. ಆದುದರಿಂದ ಈ ವೈದ್ಯ ಪದ್ಧತಿಗೆ ಪಟ್ಟಣಗಳಿಗಿಂತ ಇಂತಹ ಹಳ್ಳಿಯ ವಾತಾವರಣ ಒಳ್ಳೆದು ಎಂದು ಪ್ರತಿಕ್ರಿಯಿಸುತ್ತಾರೆ.

ಇವರಿಗೆ ಇರುವ ಗದ್ದೆ ತೋಟ, ವ್ಯವಸಾಯ ಕೆಲಸಗಳ ಒತ್ತಡಗಳ ಮಧ್ಯೆಯೂ ಹೊರಗಡೆಯಿಂದ ಬರುವಂತಹ ರೋಗಿಗಳನ್ನು ಬಹಳ ಖಾಳಜಿಯಿಂದ ನೋಡಿ ಅವರಿಗೆ ಕೂಡಲೇ ಬೇಕಾದಂತಹ ಔಷಧಿಯನ್ನು ತಯಾರು ಮಾಡಿ ಆ ಕೂಡಲೆ ಚಿಕಿತ್ಸೆ ನೀಡುವರು. ಇವರಲ್ಲಿಗೆ ಬರಲು ಸಾಧ್ಯವಾಗದೆ ಇದ್ದಂತಹ ರೋಗಿಗಳ ಮನೆಗೆ ಹೋಗಿ ಔಷಧಿ ನೀಡಿ ಉಪಚರಿಸಿ, ಅವರ ಮನೆಯವರಿಗೆ ಹಚ್ಚಲು ಹೇಳಿಕೊಟ್ಟು, ಮುಂದಿನ ಜಾಗ್ರತಾ ಕ್ರಮಗಳನ್ನೆಲ್ಲಾ ತಿಳಿಯಪಡಿಸಿ, ಊಟ, ತಿಂಡಿ, ಪತ್ಯಗಳ ಬಗ್ಗೆ ತಿಳುವಳಿಕೆ ಕೊಟ್ಟು, ಬರುತ್ತಾರೆ. ಇವರ ವೈದ್ಯ ಪದ್ಧತಿಯಿಂದ ಇವರ ರೋಗಿಗೆ ಬಹಳ ಶೀಘ್ರವಾಗಿ ಗುಣಮುಖವಾಗಿ ತೃಪ್ತಿ ಪಡುತ್ತಿದ್ದಾರೆ. ಈ ನಾಟಿ ವೈದ್ಯ ಮೂಳೆ ತಜ್ಞ ಪೂವಯ್ಯನವರ ಬಳಿಗೆ ಹಲವಾರು ತರಹದ ರೋಗಿಗಳು ಸುತ್ತಮುತ್ತಲಿನ ಹಾಗೂ ದೂರದ ಊರುಗಳಿಂದಲೂ ಬರುತ್ತಾರೆ. ಬೆಂಗಳೂರಿನಿಂದ, ಮೈಸೂರು, ಚಾಮರಾಜನಗರ, ಕೆ. ಆರ್. ನಗರ, ಹುಣಸೂರು, ಕೊಡಗು ಕಡೆಗಳಿಂದ ರೋಗಿಗಳು ಬರುತ್ತಲಿದ್ದು ಶ್ರೀಯುತರ ಸೇವೆಯನ್ನು ಪಡೆಯುತ್ತಾರೆ. ಇವರ ಈ ಸುಶ್ರೂಶೆಗೆ ಇವರ ಮನೆಯವರು, ಪತ್ನಿ ಮತ್ತು ಮಕ್ಕಳು ಸಹಾಯ ಮಾಡುತ್ತಿರುವುದಕ್ಕೆ

20ನೇ ಪುಟಕ್ಕೆ

# ಗೌತಮ ಬುದ್ಧ

ಭಾರತ ಪುಣ್ಯ ಭೂಮಿ, ಕರ್ಮಭೂಮಿ. ಸತ್ಯ, ಧರ್ಮ, ಶಾಂತಿ, ಪ್ರೇಮದ ಕಣಜ. ಧರ್ಮ, ದಾನ, ಕಟ್ಟು ಕಟ್ಟಳೆ, ರೀತಿ ನೀತಿ ತ್ಯಾಗ ಪ್ರೀತಿಯ ತವರು ಮನೆ. ಲೋಕಕ್ಕೆ ಪ್ರೀತಿಯನ್ನು ಸತ್ಯವನ್ನು ಸಾರಿದ ಪವಿತ್ರ ಭೂಮಿ. ಈ ಭಾರತ ಭೂಮಿ, ಆಯಾಯ ಕಾಲಕ್ಕೆ ಭಗವಂತನು ಬಯಸಿ ಜನ್ಮ ವೆತ್ತುವ ಕರ್ಮಭೂಮಿ. ಭಾರತ ಲೋಕಕ್ಕೆ ಸಂಚರಿಸುವ ರೈಲು. ರೈಲಿನ ಇಂಜಿನು ಭಾರತ. ಭಾರತ ಸರಿಯಾಗಿ ಚಲಿಸಿದರೆ ಅದನ್ನೊಳಗೊಂಡ ಇತರ ಭೋಗಿಗಳು ಸರಿಯಾಗಿ ಚಲಿಸುವವು. ಭಾರತವೆಂದರೆ ದೈವಾವತಾರಗಳ ತವರು ಮನೆ.

ಇಂತಹ ಪುಣ್ಯ ಭೂಮಿಯಲ್ಲಿ ಜನಿಸಿದ ಒಬ್ಬ ಮಹಾತ್ಮ ಗೌತಮ ಬುದ್ಧ. ನಾವು ಹುಟ್ಟುತ್ತೇವೆ, ಬದುಕುತ್ತೇವೆ, ಸಾಯುತ್ತೇವೆ, ನಮ್ಮನ್ನು ನಾವು ಅರಿಯಲು ಪ್ರಯತ್ನಿಸುವುದಿಲ್ಲ. ಪ್ರಯತ್ನಿಸಿದರೂ ಸಿದ್ಧಿಸುವುದಿಲ್ಲ. ಅವತಾರಿ ಪುರುಷರು ಜನ್ಮ ತಾಳುತ್ತಾರೆ. ತಮ್ಮನ್ನು ತಾವು ಅರಿಯುತ್ತಾರೆ. ಇನ್ನೊಬ್ಬರಿಗೆ ತಮ್ಮ ಜ್ಞಾನವನ್ನು ಪಸರಿಸುತ್ತಾರೆ. ತಮ್ಮ ದೇಹ ಬಿಟ್ಟು ಹೋಗುತ್ತಾರೆ. ಸದಾ ಬದುಕಿರುತ್ತಾರೆ. ಗೌತಮ ಬುದ್ಧನು 26 ವರುಷ ತನ್ನನ್ನು ತಾನು ಅರಿಯಲು, ಜ್ಞಾನಿಗಳನ್ನು, ಯೋಗಿಗಳನ್ನು, ಋಷಿ ಮುನಿಗಳನ್ನು, ಪಂಡಿತರನ್ನು ಸಂಪರ್ಕಿಸಿದರು. ಆದರೆ ತನಗೆ ಬೇಕಾದ ಜ್ಞಾನ ದೊರಕಲಿಲ್ಲ. 26 ವರುಷಗಳ ಸತತ ಪ್ರಯತ್ನದಲ್ಲಿ ಒಂದು ಪಾಠವನ್ನು ಕಲಿತರು. ಅದೇ "ತನ್ನನ್ನು ತಾನು ತನ್ನೊಳಗೆ ಮಾತ್ರ ತಿಳಿದುಕೊಳ್ಳುವುದು" Self realised through in ward search" ತನ್ನ ಆತ್ಮ ತನಗೆ ಸಾಕ್ಷಾರವಾದ ಮೇಲೆ ಲೋಕಕ್ಕೆ ಈ ಸಂದೇಶವನ್ನು ಸಾರಿದರು.

ಬುದ್ಧಂ ಶರಣಂ ಗಚ್ಛಾಮಿ, ಸಂಗಂ ಶರಣಂ ಗಚ್ಛಾಮಿ, ಧರ್ಮಂ ಶರಣಂ ಗಚ್ಛಾಮಿ. ಒಳಾರ್ಥ ಜನಾಂಗದ ಉದ್ಧಾರಕ್ಕೆ ಧರ್ಮವೇ ಆಧಾರ. ಜಪ, ತಪ, ಪ್ರಾರ್ಥನೆಗಳಿಂದ ಆತ್ಮ ಜ್ಞಾನ ಪಡೆಯುವುದು ತ್ರಾಸದಾಯಕ, ಆದರೆ ಒಳ್ಳೆಯ ದೃಷ್ಟಿ, ಒಳ್ಳೆಯ ಆಲೋಚನೆ, ಒಳ್ಳೆಯ ಮಾತು, ಒಳ್ಳೆಯ ಕೃತಿ ಇವುಗಳೇ ತನ್ನನ್ನು ತಾನು ಅರಿಯಲು ಸುಲಭೋಪಾಯ. ಸತ್ಸಂಗ ಸತ್ಕಾರ್ಯಕ್ಕೆ ನಾಂದಿ, ಸತ್ಸಂಗವೆಂದರೆ ಬರೇ ಒಳ್ಳೆಯವರ ಜತೆ ಎಂದರ್ಥವಲ್ಲ ಸತ್ಸಂಗವೆಂದರೆ ದೇವರಲ್ಲಿ ಎಲ್ಲವನ್ನೂ, ಎಲ್ಲದರಲ್ಲಿ ದೇವನನ್ನು ಕಾಣುವ ಹೃದಯ. ಯೋಚನೆಯಲ್ಲಿ ಪವಿತ್ರತೆ, ಮಾತಿನಲ್ಲಿ ಪವಿತ್ರತೆ, ಕಾರ್ಯದಲ್ಲಿ ಪವಿತ್ರತೆ. ಈ ಮೂರರ ಪವಿತ್ರತೆಯೇ ಮಾನವನ ಪವಿತ್ರತೆ.

ಗೌತಮ ಬುದ್ಧನು ಅಂದು ಸಾಮಾನ್ಯ ಶಿಶು, ಮಾನವ ಶಿಶು, ನೋವು ನಲಿವು ಕಂಡ ಶಿಶು. ಹುಟ್ಟಿದ 9 ದಿವಸದಲ್ಲಿ ಹೆತ್ತತಾಯಿ ಮಾಯಾವತಿ ಗತಿಸಿದಳು. ತಾಯಿಯಿಲ್ಲದ ಕೂಸನ್ನು ಚಿಕ್ಕತಾಯಿ ಗೌತಮಿ ಎತ್ತಿ ಸಾಕಿ ಸಲಹಿದಳು. ಚಿಕ್ಕ ತಾಯಿ ತನ್ನ ಪ್ರೀತಿಯನ್ನೆಲ್ಲಾ ಧಾರೆ ಎರೆದು ಬುದ್ಧನನ್ನು ಸಾಕಿದಳು. ಆ ಉಜ್ವಲ ಪ್ರೀತಿಯ ಸಾರುವಿಕೆಯಲ್ಲಿ ಅವನನ್ನು ಗೌತಮ ಬುದ್ಧ ಎಂದು ಕರೆಯಲ್ಪಟ್ಟರು. ಆದರೆ ಬುದ್ಧನು ಇದಾವುದನ್ನೂ ಪರಿಗಣಿಸದೆ ತನ್ನನ್ನು ತಾನು ಅರಿವುದರಲ್ಲಿ ಸಂತೃಪ್ತಿ ಹೊಂದಿದನು.

ಆಧ್ಯಾತ್ಮಿಕ ಜೀವನದಲ್ಲಿ ಹಲವಾರು ಜನರು ಮೇಲಕ್ಕೇರಿದ್ದಾರೆ. ಆದರೆ ಆಧ್ಯಾತ್ಮಕವನ್ನು ತನ್ನ ನಿತ್ಯ ಜೀವನದಲ್ಲಿ ಅಳವಡಿಸಿಕೊಂಡಿರುವವರು ಕಡಿಮೆ. ನಮ್ಮಲ್ಲೂ ಹಾಗೆ ಪುಸ್ತಕ ಜ್ಞಾನವಿದೆ ಆದರೆ ಆ ಜ್ಞಾನ ನಮ್ಮ ನಿತ್ಯ ಜೀವನಕ್ಕೆ ದೂರ. ಹೀಗಾಗಬಾರದು ಇದನ್ನು ಗೌತಮ ಬುದ್ಧನು ಅರಿತು ಕಾರ್ಯಕ್ಕೆ ತೊಡಗಿದರು. ದುಃಖ ಎಂಬುದು ವಿಚಿತ್ರ. ನಾವು ಎಷ್ಟೋ ಜನರ ಸಂಪರ್ಕ ಹೊಂದಿರುತ್ತೇವೆ. ಸಾಮಾನ್ಯವಾಗಿ ಒಬ್ಬ ಸಂತೋಷ ದಲ್ಲಿರುವಾಗ ವಿಚಾರಿಸುವುದು ಕಡಿಮೆ. ಯಾರೋ ಒಬ್ಬ ಅಳುತ್ತಾ ಕೂತಿದ್ದರೆ ವಾಡಿಕೆಯಾಗಿ ಏಕೆ ದುಃಖ ಪಡುತ್ತೀಯ ಎಂದು ಸಹಜವಾಗಿ ಕೇಳುತ್ತೇವೆ. ದುಃಖ ನಮ್ಮ ದೌರ್ಬಲ್ಯದ ಚಿಹ್ನೆ. ಸಂತೋಷ ಸಹಜ ಚಿಹ್ನೆ.

ಗೌತಮ ಬುದ್ಧನು ಬೋಧಿಸಿದ್ದು ಸ್ವಲ್ಪವೆ. ಒಳ್ಳೆಯದನ್ನು ನೋಡು, ಒಳ್ಳೆಯದನ್ನು ಆಲೋಚನೆ ಮಾಡು, ಒಳ್ಳೆಯದನ್ನು ಕೇಳು, ಒಳ್ಳೆಯದನ್ನು ಮಾತಾಡು, ಒಳ್ಳೆಯ ಕಾರ್ಯ ಮಾಡು. ಎಷ್ಟು ಸ್ವಲ್ಪ ಅಷ್ಟೇ ಅಘಾತ. ಇಂದು ನಮಗೆ ಬೇಕಾದದ್ದು ಈ ಮೇಲಿನದು, ನಮ್ಮ ಯುವ ಜನಾಂಗ ಇಂದು ಈ ಹಾಳು ಪರಿಸ್ಥಿತಿಯಲ್ಲಿ ಕೆಳ ಮಟ್ಟದ ಜೀವನ ಸಾಗಿಸುವುದಕ್ಕೆ ಕಾರಣ ನಮ್ಮನ್ನು ನಾವು ಅರಿತುಕೊಳ್ಳದಿರುವುದು. ಅರಿಯುವ ಪ್ರಯತ್ನ ಮಾಡದಿರುವುದು. ಭಾರತೀಯ ಸಂಸ್ಕೃತಿ ಬುದ್ಧನಿಗಿಂತ ಎಷ್ಟೋ ಸಾವಿರ ವರ್ಷಗಳ ಹಿಂದೆ ಇದನ್ನೆ ವೇದಗಳಲ್ಲಿ ಹೇಳಿದೆ. ಅದೆ ಸತ್ಯವನ್ನು ನುಡಿ, ಧರ್ಮವನ್ನು ಆಚರಿಸು. ಸತ್ಯ ಎಂದರೆ ಆತ್ಮದ ನುಡಿ, ಸತ್ಯ ಹೇಳುವಾಗಲೂ ಇತರರಿಗೆ ಎಳ್ಳಷ್ಟೂ ನೋವನ್ನುಂಟು ಮಾಡಬಾರದು. ಸತ್ಯ ಪ್ರಿಯವಾಗಿರಬೇಕು. ಕಂಡದ್ದನ್ನು ಕಂಡ ಹಾಗೆ ಹೇಳುವುದು ಮಾತ್ರ ಸತ್ಯವಲ್ಲ, ನಾವು ನುಡಿಯುವ ಸತ್ಯದಲ್ಲಿ ಇನ್ನೊಬ್ಬರ ಶ್ರೇಯಸ್ಸಾಗಬೇಕು. ಅದು ಸತ್ಯ. ಅದೇ ಹಿತ. ಧರ್ಮವನ್ನು ಆಚರಿಸು. ಧರ್ಮವೆಂದರೇನು? ನಮ್ಮ ವಿಚಾರದಲ್ಲಿ, ಅಭಿಪ್ರಾಯದಲ್ಲಿ, ಮಾತಿನಲ್ಲಿ ಮತ್ತು ಕೃತಿಯಲ್ಲಿ ಒಂದಾಗಿರುವುದು ಧರ್ಮ. ಧರ್ಮ ಒಂದೇ ಜಗತ್ತಿಗೆ. ಕ್ರೈಸ್ತ ಧರ್ಮ, ಮುಸ್ಲಿಂ ಧರ್ಮ, ಬುದ್ಧ ಧರ್ಮವೆಂದು ಬೇರೆ ಬೇರೆಯಿಲ್ಲ. ಧರ್ಮ ಎಲ್ಲರಿಗೂ ಎಲ್ಲ ಕಾಲಕ್ಕೂ ಒಂದೇ. ಒಟ್ಟಿನಲ್ಲಿ ಸತ್ಯ ಧರ್ಮ ಮಾನವ ಕುಲವನ್ನು ಉದ್ಧರಿಸಬೇಕು. ಇದಕ್ಕಾಗಿ ನಮ್ಮ ತರುಣ ತರುಣಿಯರು ಪ್ರಯತ್ನಿಸಬೇಕು. ಒಬ್ಬರನ್ನೊಬ್ಬರಿಗೆ ಆಶ್ರಯ ಕೊಡಿ, ಪ್ರೀತಿಯನ್ನು ಹಂಚಿಕೊಳ್ಳಿ, ತ್ಯಾಗವನ್ನು ಮೈಗೂಡಿಸಿ ಕೊಳ್ಳಿ, ಒಳ್ಳೆ ಬಾಳ್ವೆಯನ್ನು ಅನುಸರಿಸಿ, ಇದೇ ಬುದ್ಧನು ಕಂಡ ಸತ್ಯ. ಕೊಡಗಿನ ನಿವಾಸಿಗಳಾದ ಗೌಡರು ಮತ್ತು ಕೊಡವರು ಹಾಗೂ ಇತರರು ಈ ಬಗ್ಗೆ ವಿಚಾರ ಚಿಂತಿಸಿ ಮಂತಿಸಿದರೆ ಶ್ರೀ ಕಾವೇರಿ ನಾಡಿಗೆ ಕ್ಷೇಮವಲ್ಲವೆ ಎನ್ನುವ ಅರಿವು ಮೂಡಿದರೆ ಸಾಕು.

– ಚೇಂದ್ರಿಮಾಡ ಗ. ಮುತ್ತಪ್ಪ
ಕುಶಾಲನಗರ

ವಿಶ್ವದ ಎಲ್ಲಕ್ಕೂ ದೊಡ್ಡ ಸೈನ್ಯ – ಚೀನಾದ ಮುಕ್ತಿ ಸೇವಾ – 20 ಲಕ್ಷ ಜನರು

# ಬೆಂಗಳೂರಿನಲ್ಲಿ ಸಾಂಪ್ರದಾಯಕ ಕೊಡಗಿನ ಹುತ್ರಿ ಹಬ್ಬದ ಆಚರಣೆ.

ಕೊಡಗು ಗೌಡ ಸಮಾಜ ಬೆಂಗಳೂರು ಏರ್ಪಡಿಸಿದ ಸಾಂಪ್ರದಾಯಕ ಹುತ್ತರಿ ಹಬ್ಬವನ್ನು ಸಂಭ್ರಮ ಸಡಗರದಿಂದ ಆಚರಿಸಲಾಯಿತು.

ಸುಮಾರು ಮುನ್ನೂರ ಐವತ್ತಕ್ಕೂ ಮೀರಿ ಜನರು ಸೇರಿದ್ದು ವಿಶೇಷ. ಸಾಂಸ್ಕೃತಿಕ ಕಾರ್ಯಕ್ರಮದೊಂದಿಗೆ ಹಬ್ಬವನ್ನು ಪ್ರಾರಂಭಿಸಲಾಯಿತು.

ಶ್ರೀಮಾನ್ ತೋಟಂಬೈಲು ಬೆಳ್ಳಿಯಪ್ಪನವರು ತಮ್ಮ ಸಾಂಪ್ರದಾಯಕ ಗೌಡ ಉಡುಗೆ ತೊಟ್ಟು ಕದಿರು ಎತ್ತುವ ಪದ್ಧತಿಯನ್ನು ಕೊಂಬು ಓಲಗ ವಾದ್ಯಗಳಿಂದ ನೆರವೇರಿಸಿದರು. ಈ ರಮಣೀಯ ನೋಟ, ಎಲ್ಲರ ಮನಸೆಳೆಯಿತು. ಬಿರುಸು ಬಾಣ ಪಟಾಕಿಗಳ ಸುರಿಮಳೆಯಿಂದ ಕೊಡಗಿನಲ್ಲಿ ಹುತ್ರಿ ಹಬ್ಬದ ಆಚರಣೆಯಂತೆ ಸಂಭ್ರಮದ ಹಬ್ಬದ ವಾತಾವರಣ ಎಲ್ಲರ ಮನಸ್ಸಿನಲ್ಲಿ ಮೂಡಿತು.

ಈ ಸಾರಿಯ ಹುತ್ತರಿ ಹಬ್ಬದಲ್ಲಿ ಮಹಿಳೆಯರು ಹೆಚ್ಚಿನ ಸಂಖ್ಯೆಯಲ್ಲಿ ಭಾಗವಹಿಸಿದ್ದರು. ಸುಮಾರು ಒಂದು ಗಂಟೆಯ ಕಾಲ ನಡೆದ ಸಾಂಸ್ಕೃತಿಕ ಕಾರ್ಯಕ್ರಮ ಹಬ್ಬದ ಕಳೆಯನ್ನು ಹೆಚ್ಚಿಸಿತು. ಅದರಲ್ಲೂ ಪುಟಾಣಿಗಳ ನೃತ್ಯ ಕಾರ್ಯಕ್ರಮಗಳು ಎಲ್ಲರ ಮನಮೆಚ್ಚಿಸಿತು.

ಕಾರ್ಯಕ್ರಮದ ಕೊನೆಯಲ್ಲಿ ಮಹಿಳೆಯರು ತಂದಿಟ್ಟ ಫಲಹಾರ ಹಂಚುತ್ತಿದ್ದಂತೆ, ಶ್ರೀಮಾನ್ ಬಾರಿಕೆ ರಾಘುವಯ್ಯನವರು ತಮ್ಮ ತಂಡದವರೊಂದಿಗೆ ಸಾಂಪ್ರದಾಯಿಕ ಉಡುಪಿನಲ್ಲಿ ತಾವೂರು (ತಾವು ನಾಡು) ಹುತ್ತರಿ ಕೋಲಾಟ ಪ್ರದರ್ಶನ ಮಾಡಿ ಕಾರ್ಯ ಕ್ರಮಕ್ಕೆ ಮೆರಗು ನೀಡಿದರು.

ಮುಂದೆ, ಪ್ರತೀ ವರ್ಷವೂ ಈ ರೀತಿಯಲ್ಲಿ ಬಣ್ಣದ ಸಡಗರ ಸಂಭ್ರಮಗಳಿಂದ ನಾಡ ಹಬ್ಬ ಹುತ್ತರಿಯನ್ನು ಆಚರಿಸುವಂತೆ ತಾಯಿ ಕಾವೇರಿಯನ್ನು ಸ್ಮರಿಸಿದರು.

ವರದಿ : **ಕುದುಪಜೆ ಸೀತಾ ಗಣಪತಿ**

---

# ಮೈಸೂರಿನಲ್ಲಿ ಮಹಿಳಾ ಒಕ್ಕೂಟದಿಂದ ಹುತ್ತರಿ ಆಚರಣೆ

ಮೈಸೂರಿನ ಜಯಲಕ್ಷ್ಮಿ ಪುರಂನಲ್ಲಿರುವ ಕೊಡಗು ಗೌಡ ವಿದ್ಯಾರ್ಥಿನಿಲಯದಲ್ಲಿ ದಿನಾಂಕ 1-12-2001ರಲ್ಲಿ ಮೈಸೂರಿನಲ್ಲಿರುವ ಕೊಡಗು ಮತ್ತು ದ. ಜಿಲ್ಲಾ ಮಹಿಳಾ ಒಕ್ಕೂಟದಿಂದ ಹುತ್ತರಿ ಹಬ್ಬವನ್ನು ಬಹಳ ವಿಜೃಂಭಣೆಯಿಂದ ಆಚರಿಸಲಾಯಿತು. ಸುಮಾರು 300 ಕ್ಕಿಂತಲೂ ಹೆಚ್ಚಿನ ಸಮಾಜ ಬಾಂಧವರು ಸಂಜೆ 8 ಗಂಟೆಗೆ ಸೇರಿ 8-30 ಕ್ಕೆ ನೆರೆ ಕಟ್ಟಿ 9 ಗಂಟೆಗೆ ಕದಿರನ್ನೂ ಕುಯ್ಯಲಾಯಿತು.

ವಿದ್ಯಾರ್ಥಿನಿಲಯದ ಆವರಣದಲ್ಲಿ ಕುಲಗುರು ವೆಂಕಟ ರಮಣಸ್ವಾಮಿ, ತಾಯಿ ಕಾವೇರಿ ಮಾತೆ, ಇಗ್ಗುತಪ್ಪನವರನ್ನು ನೆನೆಯುದರ ಮೂಲಕ ಶ್ರೀ ಕುಯ್ಯ ಮುಡಿ ರಾಮಪ್ಪನವರು ಕದಿರು ಗುತ್ತಿಯನ್ನು ಬಾಳೆಡಿ ಉತ್ತಯ್ಯನವರ ಹೆಗಲಿಗೇರಿಸಿದರು. ಶ್ರೀಮತಿ ಚೆಟ್ಟಿಮಾಡ ಲಕ್ಷ್ಮಿ ರಘುಪತಿಯವರು ಕಂಚಿಮಿ ಹಿಡಿದು ಮುನ್ನಡೆದರು. ಕಡ್ಯಡ ಸರೋಜ ಚುಂಡಯ್ಯನವರು ಸಂಪ್ರದಾಯದ ಉಡುಪಿನಲ್ಲಿ ಜೊತೆಗೂಡಿದರು. ಪೊಲಿ ಪೊಲಿಯೇ ಬಾ ಅನ್ನುವ ವೇದ ಘೋಷದೊಂದಿಗೆ ನೆಟ್ಟ ಬೆಳೆಗೆ ನೆರೆಕಟ್ಟಿ ದೇವರನ್ನು ನೆನೆದು ಅಕ್ಕಿ ಹಾಕಿ ಪ್ರಾರ್ಥಿಸಿ ಕದಿರು ಕುಯ್ಯಲಾಯಿತು. ಕಾಳೇರಮ್ಮನ ನಾಣಯ್ಯನವರು ಕೋವಿಯನ್ನು ಹೆಗಲಿಗೇರಿಸಿ ಆಕಾಶಕ್ಕೆ ಗುಂಡು ಹೊಡೆದರು. ಪಟಾಕಿಗಳ ಆರ್ಭಟ ಗಗನ ಮುಟ್ಟುವಂತಿತ್ತು. ಒಲೆಗೆರೆಡರಂತೆ ನೆರೆ ಮತ್ತೂ ಕದಿರನ್ನೂ ಹಂಚಲಾಯಿತು. ಕೊಡಗಿನ ಪದ್ಧತಿಯಂತೆ ತಂಬಿಟ್ಟು ಮತ್ತು ಅವಲಕ್ಕಿಯನ್ನು ಪ್ರಸಾದವಾಗಿ ಹಂಚಲಾಯಿತು. ಹುತ್ತರಿ ಪ್ರಯುಕ್ತ ಕೋರನ ಇಂದು ಪ್ರಕಾಶನವರು ರೂ. 500/- ರ ಧನಸಹಾಯ ನೀಡಿ ಸಹಕರಿಸಿದರು.

– ಸಂಗಾತಿ

---

5ನೇ ಪುಟದಿಂದ

ಚಿಂತನೆಯ ಅಂಶವನ್ನು ನಮ್ಮೆಲ್ಲ ಓದುಗರ ಮುಂದೆ ವ್ಯಕ್ತ ಪಡಿಸಿದ್ದಾರೆ. ನಾವಿಂದು ಕೊಡವರು, ಗೌಡರು ಒಗ್ಗಟ್ಟಿನಲ್ಲಿಲ್ಲದೆ ಹೋದರೆ ಕೊಡಗು ಮುಂದೆ ಕೇರಳ ಮಯ ತಾಲಿಬಾನ್ ಆಗುವುದು ಎಂದು ತಮ್ಮೊಳಗಿನ ವಿರೋಧ ಮನೋಭಾವನೆಗಳು ಮೂರನೆಯವನಿಗೆ ಲಾಭಗಳಿಸಿ ಕೊಡುವುದರಲ್ಲಿ ಸಂಶಯವಿಲ್ಲ. ಆಚಾರ ವಿಚಾರಗಳು ಬಾಳ್ವೆಯ ಸ್ವರೂಪಗಳು. ಅವುಗಳಿಗೆ ಆಗಿಂದಾಗ್ಗೆ ತಕ್ಕ ರೂಪು ರೇಖೆ ಕೊಟ್ಟು ನಾವುಗಳು ನಮ್ಮ ಮೂಲ ಹಿಂದು ಸಂಸ್ಕೃತಿಯ ವೈಶಿಷ್ಟ್ಯತೆಯನ್ನು ಉಳಿಸಿಕೊಂಡು ಬರಲು ಒಗ್ಗಟ್ಟಿನಿಂದ ಬಾಳ ಬೇಕು. ಸ್ವಾರ್ಥತೆ ಪ್ರತ್ಯೇಕತಾ ಭಾವನೆಗಳು ನಮ್ಮೊಳಗೆ ಎಂದು ಬೆಳೆಯಬಾರದು. ಹಗೆತನ ಸಿರಿತನಗಳು ಶಾಶ್ವತವಲ್ಲ. ಇಳಿ ವಯಸ್ಸಿನ ಶ್ರೀ ಮುತ್ತಪ್ಪನವರ ಮನದ ಚಿಂತನೆ ಈಡೇರುವಂತಾಗಲು ಸಹಧರ್ಮೀಯ ಬಾಳ್ವೆಯ ಮಧ್ಯೆ ರಾಜಕೀಯ ಪ್ರವೇಶಸಲ್ಲದು. ಸಮಾಜದ ಗಣ್ಯರು, ಧರ್ಮೀಯ ಶಾಸಕರು ಸ್ವಾರ್ಥಭಾವನೆಗಳನ್ನು ತೊರೆದು ಒಗ್ಗಟ್ಟಿನ ಬಿತ್ತನೆ ಮಾಡಬೇಕು. ಈ ನಿಟ್ಟಿನಲ್ಲಿ ನಾವು ಒತ್ತು ಕೊಟ್ಟರೆ ನಮ್ಮ ಧರ್ಮದ ವಿಶಾಲ ಮನೋಭಾವೈಕ್ಯತೆಗೆ ದಾರಿ ಕಂಡಂತಾಗುತ್ತದೆ. ಸಹಬಾಳ್ವೆ ನಡೆಸುವುದರಲ್ಲಿ ಎಂದೂ ಸಂಶಯವಿರಬಾರದು.

– ಬೈತಡ್ಕ ಎ. ಬೆಳ್ಳಪ್ಪ

---

ವಿಶ್ವದ ಹವಾಯಿ ದ್ವೀಪದಲ್ಲಿ ಯಾವುದೆ ಸಸ್ಯಗಳಿಲ್ಲ.

# ಪತ್ರ ವಿಭಾಗ :



ಮಾನ್ಯರೆ

ಭಾಷೆ ಮತ್ತು ಸಂಸ್ಕೃತಿ ಬಗ್ಗೆ ತಾಯಿಯ ಕರ್ತವ್ಯ. ಇವುಗಳ ಬಗ್ಗೆ ಬರೆದ ಲೇಖನವು ತಾಯಿಯಾದವಳು ತನ್ನ ಮಕ್ಕಳ ಭವಿಷ್ಯದ ಬಗ್ಗೆ ಎಷ್ಟು ಕಾಳಜಿ ವಹಿಸುತ್ತಾಳೆ ಮತ್ತು ಎಲ್ಲಾ ರೀತಿಯಲ್ಲಿ ತಾಯಿಯೇ ಹೊಣೆಯಾಗುತ್ತಾಳೆ ಮತ್ತು ಅವಳು ತನ್ನ ಅಲ್ಪ ವಿದ್ಯೆಯನ್ನು ಮೊದಲು ಮಕ್ಕಳಿಗೆ ಹೇಗೆ ಧಾರೆ ಎರೆಯುತ್ತಾಳೆ ಎಂಬುವುದನ್ನು ಕೂಲಂಕುಶವಾಗಿ ಪರಿಗಣಿಸಿ ನೋಡಿದಲ್ಲಿ ಹೆಣ್ಣಿಗೆ (ತಾಯಿಗೆ) ಎಷ್ಟು ಮಹತ್ತರವಾದ ಸ್ಥಾನವಿದೆ ಎಂಬುದನ್ನು ನಾವು ಕಂಡುಕೊಳ್ಳಬಹುದು. ಅವಳು ತನ್ನ ಸ್ಥಾನಮಾನಕ್ಕಾಗಿ ಸಮಾಜದಲ್ಲಿ ಯಾವ ರೀತಿಯಲ್ಲಿ ತನ್ನ ಮಕ್ಕಳಿಗೋಸ್ಕರ ಕಾರ್ಯ ನಿರ್ವಹಿಸುತ್ತಾಳೆ ಎಂಬುದನ್ನು ಮನದಟ್ಟವಾಗಿ ನಿರೂಪಿಸಿದ್ದಾರೆ. ಮತ್ತು ಸಮಾಜದಲ್ಲಿ, ಭಾಷೆ, ಸಂಸ್ಕೃತಿ, ಧರ್ಮ ನೀತಿ, ಇವುಗಳಿಗೆ ಪ್ರೋತ್ಸಾಹಿಸಬೇಕು ಹಾಗೂ ನಾವು ಮಾಡುವ ಕೆಲಸಗಳು ಮಕ್ಕಳಿಗೆ ದಾರಿ ದೀಪವಾಗಿರಬೇಕು, ಇದರಲ್ಲಿ (ಭಾಷೆ ಮತ್ತು ಸಂಸ್ಕೃತಿ.... ಅರಿತು ರಕ್ಷಿಸಬೇಕು) ಎಂಬ ಅಂಕದಲ್ಲಿ ನಿರೂಪಿಸಿದ ಅಂಶವು ಜನರಿಗೆ ಮನದಟ್ಟುವಾಗುವಂತಿದೆ. ಇಂತಹ ವಿಷಯಗಳು ಹೀಗೆ ಇನ್ನು ಮುಂದೆ ಮೂಡಿ ಬರಲಿ ಎಂದು ಬರೆದಂತಹ ಲೇಖಕ 'ಚೇಂದ್ರಿಮಾಡ, ಗ. ಮುತ್ತಪ್ಪನವರಿಗೆ ನನ್ನ ಧನ್ಯವಾದಗಳು. ಹಾಗೆಯೇ ಇನ್ನು ಒಳ್ಳೊಳ್ಳೆಯ ಸಲಹೆಯನ್ನು ನೀಡಿ ಬರೆಯಿರಿ ಎಂದು ಕೇಳಿಕೊಳ್ಳುತ್ತೇನೆ.

ಇದರೊಂದಿಗೆ, ಗೌಡ ಜನಾಂಗದವರಿಗೂ, ಕೊಡಗು ಸಂಗಾತಿಯ, ಬಳಗದವರಿಗೂ, ಮತ್ತು ಲೇಖಕರಿಗೂ, ಹಾಗೂ ಕೊಡಗು ಸಂಗಾತಿಯ ಓದುಗರಿಗೂ ಹೊಸ ವರುಷದ ಶುಭಾಷಯಗಳು

– ಆಜಡ್ಕ ರಾಣಿ ಬಾಲಕೃಷ್ಣ
ಕುಶಾಲನಗರ

---

**4ನೇ ಪುಟದಿಂದ**

ಆಸ್ತಿಯನ್ನು ಮರುಸ್ವಾಧೀನ ಪಡಿಸಿಕೊಂಡು ಅದರ ಅಭಿವೃದ್ಧಿ ನಿರ್ವಹಣೆಗೆ ಮೀಸಲಿಟ್ಟರೆ ಮಾತ್ರ ಮುಂದಿನ ದಿನಗಳಲ್ಲಿ ಹರಿಶ್ಚಂದ್ರ ಶಿವ ದೇಗುಲ ಸುರಕ್ಷತೆ ಕಾಣುವಂತಾದೀತು. ಜೊತೆಗೆ ಈ ಪ್ರದೇಶದ ಎಲ್ಲಾ ಜಾಗದ ನಿರ್ವಹಣೆ ಮತ್ತು ದೇಗುಲದ ಉಸ್ತುವಾರಿಯನ್ನು ಅನ್ಯ ಕೋಮಿನವರಿಂದ ತೆರವುಗೊಳಿಸಿ ಅಂತಹವರಿಗೆ ಸೂಕ್ತ ಪರಿಹಾರವನ್ನು ಸರಕಾರವೇ ಭರಿಸುವ ಮೂಲಕ ಈಗ ಎದುರಾಗಿರುವ ಉದ್ವಿಗ್ನತೆ ಮತ್ತು ಅತಂತ್ರ ವ್ಯವಸ್ಥೆಯನ್ನು ಸರಿಪಡಿಸಲುಸಾಧ್ಯವಾದೀತು. ಆ ಮೂಲಕ ಸತ್ಯಕ್ಕೆ ಪ್ರತೀಕವಾಗಿರುವ ಹರಿಶ್ಚಂದ್ರ ನಾಮಾಂಕಿತ ಈ ರುದ್ರರೂಪಿ ಶಿವದೇಗುಲದ ಶ್ರೇಯೋಭಿವೃದ್ಧಿಯೊಂದಿಗೆ ನಾಡಿನ ಜನತೆ ಶಾಂತಿ ನೆಮ್ಮದಿಯೊಂದಿಗೆ ಸುಭಿಕ್ಷೆಯಿಂದ ಬಾಳಲು ಸಾಧ್ಯವಾದೀತು ಎನ್ನುವ ಆಶಯ ಎಲ್ಲರಲ್ಲಿದೆ.

ಮಡಿಕೇರಿ ಗಿರಿ



ಕೊಡಗು ಜಿಲ್ಲಾ ಯುವ ಕಾಂಗ್ರೆಸ್ ಸಮಿತಿಯ ಪ್ರಧಾನ ಕಾರ್ಯದರ್ಶಿಯಾಗಿ ಮಡಿಕೇರಿಯ ಕಟ್ರತನ ಎಂ. **ವೆಂಕಟೇಶ್ (ವೇಣು)** ಅವರನ್ನು ನೇಮಕ ಮಾಡಲಾಗಿದೆ. ಇವರು ಮಡಿಕೇರಿಯ ನಿವಾಸಿ ಕಟ್ರತನ ಮಂದಣ್ಣ ಅವರ ಪುತ್ರ

ವರದಿ : ಕಾನೆಹಿತ್ಲು ನಂದ, ಮಡಿಕೇರಿ.

---

## ಖಾಲಿ ಕುಪ್ಪಿ !!!

ತಿಳಿಯಕಾಗದ್‌ನೆ...... ಗೂಡೆ,
ಈ ಬದ್ಕ್ಕೂ....ಬಾಳ ಹಗ್‌ರ
ನೀ ಹಂಗೆ ತಿಳ್ಕಂಡ್ರೆ........
ಬದ್ಕಾದೆ ಭಿದ್ರ......ಭಿದ್ರ.
ಮನ್ಸುನ ಹರ್ದ್‌ತ್ತ ಬುಟ್ರೆ....
ನೀ.... ಹೆಂಗೆಂಗೋ ಆಡಿರೇ....
ನಿಂಗೇನೊ ಖುಷಿ ಸಿಕ್ಕುದು....
ಆದ್ರೆ... ಹೋದ ಮಾನ ತಿಗ್ರಿ ಬಂದದೆನೆ?
ಜನ್ರಾಡ್‌ವೆ ನೂರೆಂಟ್ ಮಾತ್.....
ನೀ, ಹೇಳಿಯಾ ಅವುಕೆ 'ಸಣ್ಣ ಜನತ'
ಆದ್ರೆ ನಿನ್ನ ಮನ್ಸುನ ನೀನೇ ಕೇಳ್ಕಾ.....
ಆದ್ರೂ ಹೇಳ್ನೆಯಾ...... ನೀ ಕಳ್ಸೆತಾ.....???
ದೊಡ್ಡ-ದೊಡ್ಡ ಮಾತ್‌ಗಾ ಆಡ್ರೆ...
ಸಾಲ್ದವ್ವಾ... ಹಂಗೆನೇ ನಡೆಯೊಕೂ...
ನೀನಾಡ್ದಂಗೆ ಇನ್ನೊಬ್ಬ ಆಡಿರೆ....
ನಿನ್ನ ಹುಬ್ಬೇಕೊ ಮೇಲೋದು?
ದೊಡ್ಡ ಮಾತ್‌ಗೆಲ್ಲಾ.... ಆಡಿಕೆ ಮಾತ್ರಾನಾ?
ಹಂಗೆನೇ... ನೀ ಯಾಕೆ ನಡೆಯೊದ್ನೆ....?
ಓ... ನನ್ನಕ್ಕ.... ಯೌವ್ವನ ಇರ್ಕಾಕನ,
ಎಲ್ಲವೂ ಇರ್‍ದ್ದೂ ನಿನ್ನ ಕಾಲತ್ರ.....
ಯೌವನ ಹೋಕಾಕನಾ...
ಯಾರಿದ್ದವೆನೆ... ನಿನ್ನತ್ರಾ....?
ನಿನ್ನಗತಿ ಏನಾದೆ ಗೊತ್ತಾ ನಿಂಗೆ....?
ಅವ್ ಕುಡ್ದು ಎಸ್ದ... ಖಾಲಿ ಕುಪ್ಪಿ!!!

ಮೂಡಗದ್ದೆ ಕೃಪಾ ಈರಪ್ಪ
ತಿತಿಮತಿ

---

**ಸ್ಪೇನ್‌ದೇಶದಲ್ಲಿ ಬಟ್ಟೆಯ ಮೇಲೆ ವೃತ್ತ ಪತ್ರಿಕೆ ಪ್ರಕಟವಾಗುತ್ತಿದೆ.**

# ಮುಜುಗರ ಹುಟ್ಟಿಸುವ ಬಾಯಿ ದುರ್ವಾಸನೆ

ಬಾಯಿ ದುರ್ವಾಸನೆ ಒಂದು ಸಾಮಾನ್ಯ ಸಮಸ್ಯೆ. ಇದಕ್ಕೆ ಕಾರಣ ಬಾಯಿಯಲ್ಲಿ ಅಥವಾ ದೇಹದ ಉಳಿದ ಭಾಗದಲ್ಲಿ ಇರಬಹುದಾದ ಸಮಸ್ಯೆ.

ಕೆಲವರು ತಮ್ಮ ಬಾಯಿ ದುರ್ವಾಸನೆ ಕುರಿತು ಗೊತ್ತಾದಾಗ ತಾವೇ ಅಸಹ್ಯ ಪಟ್ಟುಕೊಳ್ಳುವುದಿದೆ.

(ಹೆಲಿಟೊಫೋಬಿಯಾ) ಅಥವಾ ಇನ್ನು ಕೆಲವರಿಗೆ ತಮ್ಮ ಬಾಯಿಯ ದುರ್ವಾಸನೆ ಅರಿವಿಲ್ಲದಿರಬಹುದು.

**ಆಹಾರ ಪದಾರ್ಥ :** ಈರುಳ್ಳಿ , ಬೆಳ್ಳುಳ್ಳಿಯಂತ ಘಾಟು ವಾಸನೆಯ ಆಹಾರ ಸೇವಿಸಿದಾಗ, ಅವು ರಕ್ತದಲ್ಲಿ ಬೆರೆತು ಶ್ವಾಸದ ಮೂಲಕ ಹೊರಹಾಕಲ್ಪಡುತ್ತವೆ.

**ಸ್ವಚ್ಛತೆ ಬಗ್ಗೆ ನಿರ್ಲಕ್ಷ್ಯ :** ಹಲ್ಲು ಮತ್ತು ವಸಡುಗಳ ಸ್ವಚ್ಛತೆ ನಿರ್ಲಕ್ಷಿಸಿದಾಗ ಮತ್ತು ಕೃತಕ ಹಲ್ಲುಗಳನ್ನು ಸ್ವಚ್ಛ ಮಾಡದಿದ್ದಾಗ ಆಹಾರ ಕಣಗಳು ಹಲ್ಲಿನ ನಡುವೆ ಸೇರಿಕೊಂಡು ಬ್ಯಾಕ್ಟೀರಿಯಾ ಅವನ್ನು ವಿಭಜಿಸಿದಾಗ ಉಂಟಾಗುವ ಉತ್ಪನ್ನಗಳು/ ಅನಿಲಗಳು ವಾಸನೆಗೆ ಕಾರಣವಾಗುತ್ತವೆ.

**ಬಾಯಿ ಒಣಗುವಿಕೆ :** ಜೊಲ್ಲು ಬಾಯಿಯನ್ನು ತೇವವಾಗಿಡುವುದರ ಜೊತೆಗೆ ಸ್ವಚ್ಛಗೊಳಿಸುವ ಕೆಲಸವನ್ನು ಮಾಡುತ್ತದೆ. ಜೊಲ್ಲು ಸ್ರವಿಸುವುದು ಕಡಿಮೆಯಾಗಲು ಅದನ್ನು ಸ್ರವಿಸುವ ಗ್ರಂಥಿಗಳ ತೊಂದರೆ ಅಥವಾ ಕೆಲವು ಔಷಧಗಳು ಕಾರಣವಾಗಿರಬಹುದು.

**ತಂಬಾಕು ಸೇವನೆ :** ತಂಬಾಕು ಸೇವನೆಯಿಂದ ಹಲ್ಲುಗಳ ಕಲೆಯಲ್ಲದೆ ಬಾಯಿ ದುರ್ವಾಸನೆ ಉಂಟಾಗುತ್ತದೆ. ಅದು ವಸಡಿನ ಆರೋಗ್ಯ ಹಾಳು ಮಾಡುವುದರ ಜೊತೆಗೆ ರುಚಿ ಗುರಿತಿಸುವ ಸಾಮರ್ಥ್ಯವನ್ನು ಕುಂಠಿತಗೊಳಿಸುತ್ತದೆ.

**ವಸಡಿನ ರೋಗಗಳು :** ಬಹಳ ದಿನಗಳಿಂದ ಇರುವ ಬಾಯಿ ದುರ್ವಾಸನೆಗೆ ವಸಡಿನ ರೋಗಗಳು ಕಾರಣ.

**ಮೂಗು, ಸೈನಸ್ ಮತ್ತು ಗಂಟಲಿನ ರೋಗಗಳು :** ಮಕ್ಕಳಲ್ಲಿ ಒಮ್ಮೆಲೇ ಬಾಯಿ ದುರ್ವಾಸನೆ ಕಂಡು ಬಂದರೆ, ಅದು ಗಂಟಲಿನ ಸೋಂಕು ರೋಗದ ಚಿಹ್ನೆಯಾಗಿರಬಹುದು. ಶ್ವಾಸಕೋಶದ ಸೋಂಕು ರೋಗಗಳು, ಹಿಡಿತದಲ್ಲಿರದ ಮಧುಮೇಹ ರೋಗ, ಯಕೃತ್ತಿಗೆ ಸಂಬಂಧಿಸಿದ ರೋಗಗಳು ಮತ್ತು ಇತರೆ ಸೋಂಕು ರೋಗಗಳು ವಾಸನೆಗೆ ಕಾರಣ ಇರಬಹುದು.

ಬಾಯಿ ದುರ್ವಾಸನೆಗೆ ಗಂಧಕದ ಸಂಯುಕ್ತ ಅನಿಲಗಳು ಶೇ. 80-90 ರಷ್ಟು ಕಾರಣ. ಇವು ಬ್ಯಾಕ್ಟೀರಿಯಾ ಮತ್ತು ಜೀವಕೋಶಗಳ ಕೊಳೆಯುವಿಕೆಯಿಂದ ಉಂಟಾಗುತ್ತವೆ. ಇವುಗಳಲ್ಲಿ ಹೈಡ್ರೋಜನ್ ಸಲ್ಫೈಡ್ ಮುಖ್ಯವಾದವು. ಈ ಗಂಧಕದ ಸಂಯುಕ್ತಗಳನ್ನು ಕ್ಲೋರಿನ್ ಡೈಯಾಕ್ಸೈಡ್ ಉತ್ಪನ್ನಗಳಿಂದ ಕಡಿಮೆ ಮಾಡಬಹುದು. ಈ ಸಂಯುಕ್ತ ಇರುವ ಮೌತ್‌ವಾಶ್, ಪೇಸ್ಟ್, ಜೆಲ್ ಬಳಸಿದರೆ ಸಮಸ್ಯೆ ಬಹುಮಟ್ಟಿಗೆ ಪರಿಹಾರ ವಾಗುತ್ತದೆ. ಇದರ ಜೊತೆಗೆ ಹಲ್ಲು, ವಸಡು, ನಾಲಿಗೆಯನ್ನು ಆಗಾಗ ಸ್ವಚ್ಛ ಮಾಡಬೇಕಾಗುತ್ತದೆ. ಬಾಯಿ ದುರ್ವಾಸನೆ ಅಂಥ ದೊಡ್ಡ ಸಮಸ್ಯೆಯೇನಲ್ಲ. ತಜ್ಞ ವೈದ್ಯರ ಸಲಹೆ, ಸೂಚನೆ ಮತ್ತು ಚಿಕಿತ್ಸೆಯಿಂದ ಮುಕ್ತಿ ಪಡೆಯಬಹುದು.

**ದುರ್ವಾಸನೆ ನಿವಾರಣೆ ಹೇಗೆ?**

ಪ್ರತಿಸಲ ಆಹಾರ ಸೇವನೆ ಬಳಿಕ ಹಲ್ಲು ಉಜ್ಜಬೇಕು.

ಎರಡು ಹಲ್ಲುಗಳ ನಡುವೆ ಸಿಕ್ಕಿಕೊಂಡ ಆಹಾರ ಕಣಗಳನ್ನು ಫ್ಲಾಸ್‌ನಿಂದ ತೆಗೆದು ಸ್ವಚ್ಛಗೊಳಿಸಬೇಕು.

ಹಲ್ಲಿನ ಜೊತೆ ನಾಲಿಗೆಯನ್ನೂ ಸ್ವಚ್ಛಗೊಳಿಸಬೇಕು.

ಆಗಾಗ್ಗೆ ನೀರು ಕುಡಿಯಬೇಕು.

ಹಾಲಿನ ಉತ್ಪನ್ನ, ಮೀನು, ಮಾಂಸ ಸೇವಿಸಿದಾಗ ಬಾಯಿಯನ್ನು ನೀರಿನಿಂದ ಜೋರಾಗಿ ಮುಕ್ಕಳಿಸಬೇಕು.

ಕೃತಕ ದಂತಗಳನ್ನು ಧರಿಸುವವರು ರಾತ್ರಿ ಹೊತ್ತು ಅದನ್ನು ತೆಗೆದು ಆಂಟಿಸೆಪ್ಟಿಕ್‌ನಲ್ಲಿ ಇಡಬೇಕು.

ತಜ್ಞ ವೈದ್ಯರ ಸಲಹೆಯಂತೆ ಮೌತ್‌ವಾಶ್‌ಗಳನ್ನು ಉಪಯೋಗಿಸಬೇಕು. ಗಜ್ಜರಿಯಂತ ನಾರು ಯುಕ್ತ ತರಕಾರಿಗಳನ್ನು ತಿನ್ನಬೇಕು.

ಡಾ. ಅರುಣ, ಗಜೇಂದ್ರಗಢ

---

# ವಿಚಿತ್ರ ವಿಧಿಗೆ ಒಳಗಾದ ವಿಧವೆಯರು

ಮೂಢನಂಬಿಕೆಗೆ ಅಜ್ಞಾನ ತಂದೆಯಾದರೆ ಅನಕ್ಷರತೆಗೆ ತಾಯಿ ಮೂಲ. ವಿಧವೆಯರು ಮೂಢನಂಬಿಕೆಯ ಅನಿಷ್ಠ ಸಂಪ್ರದಾಯಕ್ಕೆ ಬಲಿಯಾಗುತ್ತಾಳೆ. ಗಂಡನ ಸಾವು ಮಹಿಳೆಯರಿಗೆ ಸಹಿಸಲಾಗದ ಬರ ಸಿಡಿಲು. ದುಃಖಿತಪ್ತರಾಗಿ ದಿಕ್ಕೆಟ್ಟ ಇವರಿಗೆ ಮುಂದಿನ ಜೀವನ ಮಾರ್ಗವನ್ನು ರೂಪಿಸುವುದು, ತಕ್ಷಣಕ್ಕೆ ಸಮಸ್ಯೆಯಾಗುವುದು. ಗಂಡ ಸತ್ತ ನಂತರ ಅವಳಲ್ಲಿ ಭಯ, ಅವಳು ಎದುರಿಸಬೇಕಾದ ಸಂಪ್ರಾದಾಯಕ ಭವಣೆ ಆಚಾರ ವಿಧಿಗಳು, ಹೂವು ಮುಡಿಯಬಾರದು, ಬಳೆ ತೊಡಬಾರದು, ಹಣೆಗೆ ಬೊಟ್ಟಿಡಬಾರದು, ಆಭರಣ ಧರಿಸಬಾರದು, ಸದಾ ಶ್ವೇತ ಬಟ್ಟೆ ಧರಿಸಬೇಕು. ಇನ್ನೂ ಹತ್ತು ಹಲವು ಕಟ್ಟು ಪಾಡುಗಳು, ಬದಲಾದ ಸಮಾಜದಲ್ಲಿ ವಿಧವೆ ಸ್ತ್ರೀಯರ ಸ್ಥಿತಿ ಸುಧಾರಣೆ ಕಂಡರೂ, ಸಾಂಪ್ರಾದಾಯಿಕ ಕುಟುಂಬದಲ್ಲಿ ವಿಧವೆ ಶುಭ ಕಾರ್ಯಗಳಿಗೆ ಹೋಗಬಾರದೆಂಬ, ಅನಿಷ್ಟ ಭಾವನೆ ಬದಲಾಗಿಲ್ಲ. ಗಂಡ ಸತ್ತ ನಂತರ ಆಕೆಯ ಭಾವನೆ ಸಾಯಬಹುದು. ಅವಳ ಕನಸು ಕ್ಷೀಣಿಸಬಹುದು. ದೇಹದ ಆರೈಕೆ ತಗ್ಗಬಹುದು. ಜವಾಬ್ದಾರಿ ಹೆಚ್ಚಬಹುದು. ಆದರೇ ಅವಳ ಹುಟ್ಟಿನಿಂದಲೂ ಬಳುವಳಿಯಾಗಿ ಪಡೆದ ಆತ್ಮಾಭಿಮಾನ ಸಾಯಬಾರದು. ಈ ನವ ಶತಮಾನದಲ್ಲಿ ಮಹಿಳೆಯರು ಗಂಡ ಸತ್ತ ನಂತರ ಜಾಗೃತರಾಗಿ ಜೀವನವನ್ನು ಮಾಧರಿಯಾಗಿಸಬೇಕು. ಸಮಾಜದ ಅವಹೇಳನ ಮಾತುಗಳಿಗೆ ಭಯಪಡದೆ ಮುನ್ನುಗ್ಗಬೇಕು. ಆಗ ಮಾತ್ರ ಹೆಣ್ಣಿಗೊಂದು ಸ್ಥಾನ.

– ಬೈತಡ್ಕ ದೇವಮ್ಮ, ಮಡಿಕೇರಿ.

---

ನೇಪಾಳವು ಎಂದು ಗುಲಾಮಗಿರಿಯನ್ನು ಅನುಭವಿಸಿಲ್ಲ.

# ಪಾಶ್ಚಾತೀಕರಣದ ಅಮಲಿನಲ್ಲಿ ಯುವ ಜನಾಂಗ

ಇಂದಿನ ಯುವ ಜನಾಂಗ ಪಾಶ್ಚಿಮಾತ್ಯ ಸಂಸ್ಕೃತಿಯ ಅನುಕರಣೆಯಲ್ಲಿ ತಲ್ಲೀನವಾಗಿದೆ. ಚಿತ್ರ ವಿಚಿತ್ರ ವೇಷ ಭೂಷಣಗಳ ಪಾಶ್ಚಿಮಾತ್ಯ ಸಂಗೀತದ ಬೆನ್ನತ್ತಿರುವ ಯುವ ಪೀಳಿಗೆಯ ಸ್ವೇಚ್ಛಾ ವರ್ತನೆಗೆ ಲಂಗು ಲಗಾಮಿಲ್ಲವಾಗಿದೆ.

ಪಟ್ಟಣದ ರಸ್ತೆಗಳಲ್ಲಿ ಒಂದು ಸುತ್ತು ಹಾಕಿದರೆ ಸಾಕು, ಯುವ ಜನಾಂಗದ ಅಭಿರುಚಿಯ ಕವಲುಗಳು ಕಣ್ಣಿಗೆ ರಾಚುತ್ತಿದೆ. ಇವು ಪಾಶ್ಚತ್ಯೀಕರಣಗೊಂಡ ಭಾರತೀಯ ಯುವ ಪೀಳಿಗೆಯ ಬಾಹ್ಯ ಕುರುಹಷ್ಟೇ. ಇವರ ಚಿಂತನೆ, ಜೀವನ ದೃಷ್ಟಿ, ಆಕಾಂಕ್ಷೆಗಳನ್ನು ಕೆದಕಿದರೆ ಹುಸಿತನದ ಹೊರತು ಮತ್ತೇನು ಹೊರ ಬೀಳುವುದಿಲ್ಲ.

ಮಹಾ ನಗರಗಳ ಯುವ ಜನಾಂಗಕ್ಕೆ ಬದುಕಿನ ಪ್ರತಿಯೊಂದು ನಮೂನೆ ಪಶ್ಚಿಮದ ಶಂಖದಿಂದಲೇ ಬರಬೇಕು. ಅಂದಾಗಲೇ ಅದಕ್ಕೆ ಮಾನ್ಯತೆ. ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಯಾವ ಮೌಲ್ಯಗಳ ಬಗೆಗೆ ಜಿಗುಪ್ಸೆ ಬೆಳೆದಿದೆಯೋ ಅವು ಭಾರತದ ಈ ಯುವ ವಲಯದಲ್ಲಿ ಬೇರು ಬಿಡುತ್ತವೆ.

ವಿದ್ಯಾರ್ಥಿ ವಲಯದಲ್ಲಿ ದೇಶ - ಪ್ರೇಮ ಶಬ್ಧಗಳಿಗೆ ಕವಡೆ ಕಿಮ್ಮತ್ತು ಇಲ್ಲ. ಇಂಥ ಅರ್ಥಹೀನ ಪದ ಉಸುರುವ ಗಾಂಧಿಗಳನ್ನು ಚಾಲಾಕಿ ವಿದ್ಯಾರ್ಥಿಗಳು ಅಸ್ಪೃಶ್ಯರನಾಗಿಸಿ ಬಿಡುತ್ತಾರೆ. ಈ ನಿಟ್ಟಿನಲ್ಲಿ ಮಕ್ಕಳೇನು ಕಡಿಮೆ?

ದೂರ ದರ್ಶನದಲ್ಲಿ ವಿದೇಶಿ ಚಾನಲ್ ವೀಕ್ಷಿಸುತ್ತಾ ಭಾರತೀಯತೆಯ ಪೊರೆ ಕಳಚತೊಡಗಿದ್ದಾರೆ. ಮನೆಯಲ್ಲಿ ಸದಾಭಿರುಚಿಯ ಸಾಹಿತ್ಯ ಪುಸ್ತಕಗಳು ಸಿಗುವುದಿಲ್ಲ. ಸಿನಿಮಾ, ಗ್ಲಾಮರ್ ಪತ್ರಿಕೆಗಳಷ್ಟೇ ಟೀಪಾಯಿ ಮೇಲಿರುತ್ತದೆ. ಉಳಿದಂತೆ ವಿ. ಸಿ. ಕಂಪ್ಯೂಟರ್, ವೀಡಿಯೋ, ಗೇಮ್‌ಗಳು ಮಕ್ಕಳ ದೈನಂದಿನ ಒಡನಾಡಿಗಳಾಗಿವೆ.

ಹೆಗಲ ಮೇಲೆ ಕೂದಲು ಹರವಿಕೊಂಡು ಯುವಕರಿಗೆ ಒಂದು ಮೋಟಾರ್ ಸೈಕಲ್ ಇರಲೇಬೇಕು. ಆತನ ಬದುಕು ಅಷ್ಟರ ಮಟ್ಟಿಗೆ ಸಾರ್ಥಕ. ಹುಡುಗರಿಗೆ ಹುಡುಗಿಯರಂತೆ ಕಾಣುವ ಬಯಕೆಯಾದರೆ, ಹುಡುಗಿಯರಿಗೆ ಹುಡುಗರಂತೆ ತೋರುವ ಅಭಿಲಾಷೆ, ಅದಕ್ಕಾಗಿ ಬ್ಯೂಟಿ ಪಾರ್ಲರ್‌ಗಳಿಗೆ ಅಲೆದಾಟ. ಇವರು ಧರಿಸುವ ಆಭರಣಗಳು ಮೈಮಾಟದೊಂದಿಗೆ ಸಮತೋಲನ ಹೊಂದಿರುವುದಿಲ್ಲ. ಸಹಜ ಸೌಂದರ್ಯಕ್ಕೆ ಕಳೆ ಕಟ್ಟಿಸುವ ಬದಲು ವಾಕರಿಗೆ ಹುಟ್ಟಿಸುವಂತಿರುತ್ತದೆ. ಇತ್ತೀಚೆಗೆ ವಿದ್ಯಾರ್ಥಿಗಳಲ್ಲಿ ರೂಪದರ್ಶಿಯಾಗುವ ಬಯಕೆ. ಅದಕೋಸ್ಕರ ಬಟ್ಟೆಯ ಹಂಗು ತೊರೆಯಲು ಸಿದ್ಧ! ಅವರ ನಂಬಿಕೆ ಪ್ರಕಾರ ಅರೆ ಬೆತ್ತಲೆಯಾಗಿ ಕ್ಯಾಮರಾ ಎದುರು ನಿಲ್ಲುವುದು. ಸೃಜನ ಶೀಲ ಮನಸ್ಸಿನ ಪರಾಕಾಷ್ಠ ಸ್ಥಿತಿ. ಕಾಯಕವೇ ಆಲಯ. ಇಂಥ ಅಂತರಾಷ್ಟ್ರೀಯ ಮಟ್ಟದ ನೈತಿಕತೆ ಭಾರತೀಯ ಸಮಾಜಕ್ಕೆ ಎಷ್ಟರ ಮಟ್ಟಿಗೆ ರುಚಿಸೀತು ಎಂಬುದು ಯಕ್ಷ ಪ್ರಶ್ನೆ.

ಆಧುನಿಕ ಪಾಶ್ಚಾತ್ಯ ಸಂಗೀತವೆಂದರೆ ಯುವ ಪೀಳಿಗೆಗೆ ಪಂಚ ಪ್ರಾಣ. ಅದು ಅರ್ಥವಾಗದಿದ್ದರೂ ತಲೆದೂಗುತ್ತಾ, ಸೊಂಟ ಬಳಕಿಸುತ್ತಾ ಸಂಗಾತಿಯೊಂದಿಗೆ ನರ್ತಿಸುವುದು ಒಂದು ಪ್ರತಿಷ್ಠೆಯಾಗಿದೆ. ಅವರಿಗೆ ಭಾರತದ ಸಂಗೀತದ ಪಿತಾಮಹರ ಹೆಸರು ಗೊತ್ತಿರದಿದ್ದರೂ ಪ್ರಿನ್ಸ್, ಮಡೋನಾ, ಮೈಕೆಲ್ ಜಾಕ್ಸನ್ ಚೆನ್ನಾಗಿ ಗೊತ್ತು. ಯುವ ಜನಾಂಗದ ಸಧ್ಯದ ಸ್ಥಿತಿಯಂತೂ ಹೀಗಿದೆ? ಇದನ್ನು ಬದಲಾಯಿಸಲು ಸಾಧ್ಯವೋ, ಅಸಾಧ್ಯವೋ ಎಂಬುದು ಬೇರೆ ವಿಚಾರ.

**ಪೊಕ್ಕುಲಂಡ್ರ ಕೀರ್ತಿ ಕುಂಞಪ್ಪ, ಮೈಸೂರು**

## ಶುಭ ವಿವಾಹ

1) ಸೋಮವಾರ ಪೇಟೆ ಟೌನ್‌ನಲ್ಲಿರುವ ಉದಯ ಪ್ರೆಸ್‌ನ ಮಾಲಿಕರಾದ ಕುದುಕುಳಿ ರಾಮಪ್ಪನವರ ಮಗಳು ನೂತನ್‌ಳಿಗೂ ಮತ್ತು ಮಡಿಕೇರಿ ನಿವಾಸಿ ದೇವಜನ ದಿ|| ಸುಬ್ಬಯ್ಯನವರ ಪುತ್ರ ದಯಾನಂದನಿಗೂ ದಿನಾಂಕ 21-10-2001 ರಲ್ಲಿ ಮಡಿಕೇರಿಯ ಕೆಳಗಿನ ಗೌಡ ಕಲ್ಯಾಣ ಮಂಟಪದಲ್ಲಿ ಬಾರಿ ವಿಜೃಂಭಣೆಯಿಂದ ನಡೆಯಿತು.

2) ಮಡಿಕೇರಿ ಸಮಿಪ ಜೋಡು ಪಾಲ ನಿವಾಸಿ ಚೆರಿಯ ಮನೆ ದಿ|| ಚಿಣ್ಣಪ್ಪನವರ ಪುತ್ರ ಪ್ರಮೋದ್ ಕುಮಾರನಿಗೂ ಮತ್ತ ಊರು ಬೈಲು ಗ್ರಾಮದ ನಿಡುಂಜಿ ಶಿವರಾಮನವರ ಮಗಳು ವಾಣಿಗೂ ದಿನಾಂಕ 29-10-2001 ರಂದು ಮಡಿಕೇರಿಯಲ್ಲಿರುವ ಮೇಲಿನ ಗೌಡ ಸಮಾಜದಲ್ಲಿ ಬಹಳ ವಿಜೃಂಭಣೆಯಿಂದ ನಡೆಯಿತು.

3) ಅರ್ವತ್ತೋಕ್ಲು ಗ್ರಾಮದ ಪಟ್ಟಡ ಮಾಚಯ್ಯನವರ ಮಗಳು ಪದ್ಮಿನಿಳಿಗೂ ಮೊಣ್ಣಂಗೇರಿ ಗ್ರಾಮದ ಕೋಚನ ದೊಡ್ಡಯ್ಯನವರ ಮಗ ಡಿನೇಶನಿಗೂ ದಿನಾಂಕ 26-11-2001 ರಲ್ಲಿ ಮಡಿಕೇರಿಯಲ್ಲಿರುವ ಮೇಲಿನ ಗೌಡ ಸಮಾಜದಲ್ಲಿ ಜರುಗಿತು.

4) ಕುಶಾಲನಗರ ನಿವಾಸಿ ಕೋಚನ ಪೂವಯ್ಯ ಗೋಪಾಲ ನವರ ಮಗ ಸುಧೀಂದ್ರನಿಗೂ ಮತ್ತೂ ಕುಂಬಳದಾಳು ಗ್ರಾಮದ ಕರ್ಣಯ್ಯನ ಕಾಳಪ್ಪನವರ ಮಗಳು ಪಾವನಳಿಗೂ ದಿನಾಂಕ 25-11-2001 ರಲ್ಲಿ ಮಡಿಕೇರಿಯ ಮೇಲಿನ ಗೌಡ ಸಮಾಜದಲ್ಲಿ ಜರುಗಿತು.

5) ಮಂಡ್ಯ ನಿವಾಸಿ ದಂಬೆ ಕೋಡಿ ಚೆಟ್ಟಿಯಪ್ಪನವರ ಮಗ ಶಶಿಧರನಿಗೂ ಬಲಮುರಿ ಗ್ರಾಮದ ಚೀಯಪ್ಪನ ಪೂವಯ್ಯನವರ ಮಗಳು ನೂತನ್‌ಳಿಗೂ ದಿನಾಂಕ 16-12-2001ರಲ್ಲಿ ಕುಶಾಲ ನಗರ ಗೌಡ ಕಲ್ಯಾಣ ಮಂಟಪದಲ್ಲಿ ಬಾರಿ ವಿಜೃಂಭಣೆಯಿಂದ ನಡೆಯಿತು.

**- ಸಂಗಾತಿ**

ಆಸ್ಟ್ರೇಲಿಯಾದ ಯೊಮೊನಿ ಅಲ್ಲಿಯ ಜೀವನ ಕೇವಲ ಸರ್ಪಹಾರ ಮಾತ್ರ

# ಗೌಡ ಮಹಿಳಾ ಲೋಕ

**(ಅರೆಗನ್ನಡ ಭಾಷಿಕರ ಗೌಡ ಸಂಸ್ಕೃತಿಯ ಮದುವೆ ಚಪ್ಪರ ದಿನ ನಡೆಯುವ ಶಾಸ್ತ್ರಗಳ ವಿವರಣೆಯು ಗೌಡ ಮಹಿಳಾ ಒಕ್ಕೂಟ ಗೋಣಿ ಕೊಪ್ಪಲಿನ ಸದಸ್ಯರೊಡನೆ ಕಾರ್ಯಕ್ರಮವು ಆಕಾಶವಾಣಿ ಮಡಿಕೇರಿ ಕೇಂದ್ರದಿಂದ 6-11-2001 ರಂದು ಬಿತ್ತರಗೊಂಡಿತು.)**

**ಇಂದ್ರಾಕ್ಷಿ :** ಗೌಡ ಸಂಸ್ಕೃತಿಲಿ ಮದುವೆಲಿ ಸಾಮಾನ್ಯಾಗಿ ಹೆಣ್ಣ್ ಮಕ್ಕಳ ಪಾತ್ರ ಮುಖ್ಯ ಆಗಿದ್ದದೆ. ಇಲ್ಲಿ ಪ್ರತಿಯೊಂದು ಶಾಸ್ತ್ರಕ್ಕೂ ಸೋಬಾನೆ ಹಾಡ್‌ಗ ಇದ್ದವೆ. ಅದರ್‌ಲಿ ಆ ಜನಾಂಗದ ಸಂಸ್ಕೃತಿನ ಹಾಡ್‌ನ ರೂಪಲಿ ಹೆಣ್ಮಕ್ಕ ಹೇಳುವೆ. ಹಿಂಗಾಗಿ ಮದುವೆಲಿ ಪ್ರತಿ ಶಾಸ್ತ್ರಲೂ ಸೋಬಾನೆ ಹಾಡ್‌ಗ ಮಹತ್ತರ ಪಾತ್ರ ವಹಿಸೊಳೊ ಜಾನಕಿ ಅಕ್ಕಾ. ಇಂದ್ ನೀವು ನಮಿಗೆ ಮದುವೆ ಚಪ್ಪರ ದಿನ ಏನೇನ್ ಶಾಸ್ತ್ರಗಳ ಮಾಡುವೆತ ತಿಳ್ಸಿಕೊಡಕು.

**ಜಾನಕಿ :** ವಳ್ಳ ಪ್ರಶ್ನೆ ಕೇಳ್ದರಿ ನೋಡಿ! ಮದುವೆ ಶಾಸ್ತ್ರಗಳ ಬಗ್ಗೆ ಹೇಳಿಕೆ ಮುಂದೆ ಗೌಡ  ಸಂಸ್ಕೃತಿ ತೇಳ್ದರ ಬಗ್ಗೆ ಎರ್ಡ್ ಮಾತ್ ಹೇಳ್ನೆ. ಅದ್ ಹಿಂದೂ ಧರ್ಮದ ಇತರ ಜನಾಂಗಗಳ ಸಂಸ್ಕೃತಿಯಷ್ಟೇ ಹಳೆದ್. ಧರ್ಮಶಾಸ್ತ್ರ ಧಾರ್ಮಿಕ ವಿಧಿ ಇವುಗಳ ಮ್ಯಾಲೆ ಮತ ಜಾತಿ ಕಟ್ಟಳೆಗಳ್ನ ಉಳ್ಸಿಕಾಗಿ ಕಟ್ಟೆಮನೆ ತೇಳಿ ಮಾಡ್ದೊ. ಕಟ್ಟೆಮನೆತೇಳ್ರೆ ಒಂದು ಗುಂಪುನ ಜನಾಂಗದ ಹಿರಿಯರಿಗೆ ಇರುವ ಅಧಿಕಾರ ತ ತಿಳ್ಕಣಕ್. ಆ ಕಟ್ಟೆ ಮನೆಗಳ ಮೂಲಕ ಅವರ ಜನಾಂಗದ ಪದ್ಧತಿಗಳ್ನ ಕಾಪಾಡಿಕೊಂಡ್ ಬಂದ್ ಕೊಡಗ್‌ಲಿ ಸನ ಕಟ್ಟೆಮನೆವು ಅಲ್ಲದೆ ಇತರ ಮನೆವು ಸನ ವಳೊತ ಹಿರ್ಯವು ಹೇಳ್ದ ಮಾತ್.

**ಇಂದ್ರಾಕ್ಷಿ :** ಹೌದು? ಗೌಡ ಸಂಸ್ಕೃತಿ ಇರ್ದು ಕನ್ನಡ ಸಂಸ್ಕೃತಿ-ಆದರೆ ಅವು ಅರೆಭಾಷೆ ಅಥವಾ ಅರೆಗನ್ನಡ ಯಾಕೆ ಮಾತಾಡುವೆ?

**ಜಾನಕಿ :** ನೋಡಿ ಅಕ್ಕಾ! ಇವರ ಬಾಸೆ ಕನ್ನಡನೆ. ಆದರೆ ಇದ್ ಕನ್ನಡ ನಾಡ್‌ನ ಹಳೆ ಕನ್ನಡ ನಡುಗನ್ನಡ ಹೊಸ ಕನ್ನಡತ ಕಾಲ ಬದಲಾವಣೆ ಆದಂಗೆ ಬಾಸೆನೂ ಬದಲಾವಣೆ ಆತ್, ವ್ಯವಸಾಯ ಮುಖ್ಯ ಕಸುಬು ಆಗಿದ್ದ ಇವು ಮನೆಲಿ ಮಾತಾಡ್ ಕಾಕನ ನಡುಗನ್ನಡ ಬಾಸೆನೆ ಉಳ್ದೂತ್ ಅದ್ಕೆ ಅರೆಬಾಸೆತ ಹೆಸ್‌ರಾತ್, ಹಾಂಗೆ ಈಗ ಅರೆ ಗನ್ನಡ ತ ಕರ್ದವೆ. ಈಗನ ಕನ್ನಡಕ್ಕೆ ಹೋಲ್ಸಿರೆ ನಾವು ಮಾತಾಡುದು ನಿಜವಾಗಿ ಅರೆಗನ್ನಡ ಮತ್ತೆ ಇದ್ ಎಲ್ಲವುದಕ್ಕೂ ಸುಲ್ಬಾಗಿ ಅರ್ಥ ಆದೆ. ಆದರೆ ಕೆಲವು ಜನ ಅರೆಗೌಡ ತ ಕರ್ದವೆ. ಅದ್ ತಪ್ಪು ಅರೆಗನ್ನಡ ಭಾಷೆ ಸರಿಯಾದ ಅರ್ಥ(ರ್ತ)

**ಇಂದ್ರಾಕ್ಷಿ :** ಅದ್ ಸರಿ ಈಗ ಗೌಡ ಸಂಸ್ಕೃತಿಲಿ ಮುಖ್ಯವಾಗಿ ಏನೇನ್ ಶಾಸ್ತ್ರಗ ವಳೋತ ಹೇಳಿ ನೋಡ್ನೋ?

**ಜಾನಕಿ :** ನೋಡಿ ಅಕ್ಕಾ ಮುಖ್ಯವಾಗಿ ಬಾದು ತೇಳ್ರೆ ವೀಳ್ಯ ಸಾಸ್ತ್ರ, ಅಕ್ಕಿ ಸಾಸ್ತ್ರ, ಎಣ್ಣೆ ಸಾಸ್ತ್ರ, ಹಸೆ ಬರಿಯೊದು ಮದ್‌ರಂಗಿ ಸಾಸ್ತ್ರ ಮತ್ತೆ ಮಡಿಲಕ್ಕಿ ಸಾಸ್ತ್ರ ತ ಇನ್ನ್ ಬೇಕಸ್ಟ್ ಸಾಸ್ತ್ರಗ ವಳೊ. ಆದರೆ ಇಂದ್ ನಾವು ಅಕ್ಕಿ ಸಾಸ್ತ್ರ ಮತ್ತೆ ಎಣ್ಣೆ ಶಾಸ್ತ್ರದ ವಿಷಯಕ್ಕೆ ಬರೊನ. ಈ ಎಲ್ಲಾ ಶಾಸ್ತ್ರಗ ಬಹಳ ಹಿಂದೆ ಹಿಂಧೂ ಧರ್ಮ ಶಾಸ್ತ್ರಂದ ಬಂದ ಪದ್ಧತಿಗ. ಮದುವೇಲಿ ಮದ್ ಮಕ್ಕಳ ತಲೆ ಮ್ಯಾಲೆ ಹಾಕುವ ಅಕ್ಕಿ ಉಟ್ಟಿಲ್ಲಾ? ಅದ್ ಮಾನವನ ಜೀವನ - ಧಾತು ಆ ಗುಟ್ಟು. ಅಲ್ಲದೆ ಅನಂತ ಸಕ್ತಿನ ಕೊಡುವ ಲಕ್ಷ್ಮಿ ಸಹ ಹೌದು, ಮದುವೆ ತೇಳುವ ಈ ಶುಭ ಸಮಾರಂಭ ಹಿಂದೂಗಳಿಗೆ ಅತ್ಯಂತ ಮಹತ್ವ ಹೊಂದಿರುವಂತೆ ಒಂದು ವಿಧಿ. ನಮ್ಮ ಹಿರಿಯವು ಹೆಣ್ಣ್ ಕೊಡ್ದೂಕೆ ಕನ್ಯಾದಾನತ ಕರ್ದಳೊ. ಮದುವೆನ ಒಂದು ಹೆಂಣ್ ಮತ್ತೆ ಗಂಡ್‌ನ ಒಟ್ಟುಗೂಡ್ಸುವ ಒಂದು ವಿಧಿ ತೇಳಿ ಭಾವಿಸದೆ ಆ ವಿಧಿಗೆ ನಮ್ಮವು ಹೆಜ್ಜೆ ಹೆಜ್ಜೆಗೂ ಅಲ್ಲಿ ಕೂಡ್ದವರ ಅನುಮತಿ ಕೇಳಿ ಮುಂದುವರ್ಸುವೆ, ಅಂದರೆ ಪ್ರತಿ ಶಾಸ್ತ್ರಗಳ ಮಾಡಿಕೆ ಮುಂದೆ ಹತ್ತ್ ಕುಟುಂಬ ಹದ್ನೆಂಟ್ ಗೋತ್ರದ ಸಮಸ್ತ ಬಂದು ಬಾಂಧವರ ಆಶೀರ್ವಾದ ತಮ್ಮ ಕುಲದೇವರ ಕೃಪೆ ಗುರುಕೃಪೆ ಸೋದರ ಸಮ್ಮಂದದ ಅನುಮತಿ ಕೇಳ್ತೆ.

**ಇಂದ್ರಾಕ್ಷಿ :** ಕೂಡ್ದವು ಕೇಳ್ರೆ ಯಾರ್ಯಾರ್?

ಒಂದು ಗುಂಪುಲಿ ಅಥವಾ ಒಂದು ಊರುಲಿ ಬದುಕಿ ಬಾಳಿಕೆ ಕಷ್ಟ ಸುಖಲಿ ಒಬ್ಬರಿಗೊಬ್ಬ ಸಹಕರಿಸಿಕೆ ಎಲ್ಲಾ ತರದ ಜನ್ರ ಸಹಕಾರ ಬೇಕು. ಅದ್ಕೆ ಹತ್ತ್ ಕುಟುಂಬತ ಹೇಳುವೆ. ಆ ಹತ್ತ್ ಕುಟುಂಬಲಿ ಹದ್ನೆಂಟ್ ಗೋತ್ರದವು ಸೇರಿದ್ದವೆ. ಅವರೆಲ್ಲವುಸನ ಅತ್ತಿತ್ತ ಕೂಡಿ ಕೆಲ್ಸ ಮಾಡುವೆ. ಹಂಗಾಗಿ ಗೌಡ ಜನ ಆ ಗುಂಪುಗೆ ಸೇರ್ದರ್‌ಂದ ಅದೇ ನುಡಿಕಟ್ಟ್‌ನ ಅನುಸರ್ಸಿ ಕೆಲ್ಸ ಮಾಡುವೆ.

ಅಷ್ಟೆ ಅಲ್ಲಾ ಇವರ ಮದುವೆಲಿ ವಾದ್ಯದವು, ಮಡಿವಾಳ, ಕ್ಷೌರಿಕ, ಕುಂಬಾರ, ಬ್ರಾಹ್ಮಣ, ಬಳೆಗಾರ ಸಹ ಮುಖ್ಯ ಪಾತ್ರ ವಹಿಸುವೆ, ಇನ್ನ್ ಚಪ್ಪರ ದಿನದಶಾಸ್ತ್ರಗಳ್ನ ನೀವು ಹೇಳಿ ಅಕ್ಕಾ......

**ಮದುವೆ ಸಮಾರಂಭಲಿ ಅಡ್ಗೆ ಮಾಡಿಕೆ ಒಲೆಪೂಜೆ ಮಾಡ್ದು :** ಒಲೆ ಪೂಜೆಗೆ ಗೊತ್ತು ಪಡ್ಸಿದ ಜಾಗಲಿ 5 ಒಲೆ ಹಾಕಿ ಸೆಗಣಿ ಸಾರ್ಸಿ ಐದ್ ಜನ ಮುತ್ತೈದೆ ಹೆಣ್ಮಕ್ಕ ಸೇರಿ ರಂಗೋಲೆ ಬರ್ದ್ ಗಣ್‌ಪತಿಗೆ ಮಡ್ಗಿಕೆ ಮಣ್ಣಿನ ದೀಪ ಹೊತ್ಸಿದ ಮ್ಯಾಲೆ ತೆಂಗಿನಕಾಯಿ ಒಡ್ದ್ ಹೂ ಮುಡ್ಸಿ ಕೈ ಮುಗ್ದ್ ಒಲೆಗೆ ಸೌದೆ ಮಾಡ್ದೂಕು. ಐದ್ ಒಲೆಗಳ ಮುಂದೆ ಐದ್ ಕೊಡಿ ಬಾಳೆಲೆ ಮಡ್ಗಿ ಅದ್ಕೆ ಅಕ್ಕಿ ಹೋದುರಿ ಹಾಕಿ ಎಲೆನ ಕೊಡಿಗೆ ಎಣ್ಣೆಗೆ ಮುಳುಸಿದ ನೆಣೆ ಬತ್ತಿಗಳ್ನ ಹಿಡ್ದ್ ಹೊತ್ತಿಸಿ ಅದರಿಂದ್ ದೀಪ ಉರ್ದೊಕ್ಕು ಮತ್ತೆ ಅದರಿಂದ ಕರ್ಪೂರ ಇಲ್ಲದೆ ಎಣ್ಣೆ ಬತ್ತಿಲಿ ಸೌದೆಗೆ ಬೆಂಕಿ ಹಿಡ್ಸೊಕು. ಒಂದು ಸಣ್ಣ ಪಾತ್ರೇಲಿ ಹಾಲ್ ಕಾಸಿ ಉಕ್ಕುಸಿದ ಮ್ಯಾಲೆ ಎಲ್ಲಕ್ಕಿಂತ ದೊಡ್ಡ ಒಲೆಗೆ ದೊಡ್ಡ ಕಡಾಯನ ಐದ್ ಜನ ಹಿಡ್ದ್ ಎತ್ತಿ ಮಡ್ಗಿ ನೀರ್ ಹೊಯ್ದ್ ಒಂದು ದೊಡ್ಡ ಮರದ ಸಟ್ಟ್‌ಗನ ಎಲ್ಲವೂ ಸೇರಿ ಹಿಡ್ದ್ ದೇವ್ರನ ನೆನ್ಸಿಕೊಂಡ್ ಮೂರ್ಸುತ್ತು ತಿರ್ಗ್ಸೊಕು. ಇದ್ ಜಂಬಾರಲಿ ಎಲ್ಲವು ಯಾವ ತೊಂದರೆ ಇಲ್ಲದೆ ಎತ್ತೊಕುತ ಹಿರಿಯವು ಮಾಡ್ದಂತ ಕ್ರಮ ಇಂದಿಗೂ ಉಟ್ಟು. ಇಸ್ಟ್ ಆದ ಮ್ಯಾಲೆ ಅಡಿಗೆಯವು ಅವರ ಕೆಲ್ಸನ ಸುರು ಮಾಡುವೆ.

**ಇನ್ನ್ ಊರು ಪತ್ತಿ ಕೊಡುವ ಕ್ರಮ :** ಇಷ್ಟೆಲ್ಲಾ ಆಕಾಕನ ಮುಸ್ಸಂಜೆ ಹೋತ್ತಾಗ್ತ ಇದ್ದದೆ. ಮದುವೆ ಮನೆಗೆ ಊರವು ಬಾಕೆ ಸುರಾದೆ. ಬಂದ್ರ ನೆಂಟ್ರ್‌ಗೆ ಅಂಗಳದ ಮೂಲೆಲಿ ಹಂಡೆಲಿ ತುಂಬಿಸಿ

ಅಮೇರಿಕೆಯ ಕಂಗರೂ ರೈಟ ಆಯುಷ್ಯವೆಲ್ಲಾ ನೀರು ಕುಡಿಯದೆ ಜೀವಿಸುತ್ತದೆ.

ನೀರ್‌ನ ಹಿತ್ತಾಳೆ ಚೊಂಬುಲಿ (ಅದ್ ಪಳ ಪಳತ ಹೊಳೆತಿರೊಕು) ಕೊಡುವ ಕ್ರಮ. ಮನೆಗೆ ಹತ್ತಿ ಕಾಲ್ ಹಿಡ್ದೆ ನಮಸ್ಕಾರ ಮಾಡಿ, ಎಲೆ ಅಡ್ಕೆ ಕೊಟ್ಟು, ಎಲ್ಲವು ಬಂದ್ ಸೇರ್ದ್ರ ಮ್ಯಾಲೆ ಕುಟುಂಬದ ಯಜಮಾನ ಒಂದು ಕೈಲಿ ನೀರ್, ಇನ್ನೊಂದು ಕೈಲಿ ಪಚ್ಚೆಲಿ ಹೊರಿಯಕ್ಕಿ ಬಾಳೆಣ್ಣ್ ತೆಂಗಿನಕಾಯಿ ಎಲೆ ಅಡ್ಕೆ ಮಡ್ಗಿ ಊರ್‌ನ ಮುಖ್ಯಸ್ಥರಿಗೆ ಹೇಳುವೆ, ಇಂದ್ ನೀವೆಲ್ಲವು ಇಲ್ಲಿ ಸೇರಿ ನಮ್ಮ ಕಾರ್‌ಬಾರ್‌ನ ಯಾವ ತಪ್ಪು ಬಾರದಂಗೆ ನಡ್ಸಿಕೊಡುವ ಬಾರ ನಿಮ್ಮ ಮ್ಯಾಲೆ ಉಟ್ಟುತ್ತೇಳಿ ನಮಸ್ಕಾರ ಮಾಡುವೆ. ಇದ್ ಯಾಕೆ ತೇಳ್ರೆ ಒಂದು ಮದುವೆ ತೇಳ್ರೆ ಒಬ್ಬನ ಸೊತ್ತಲ್ಲ. ಅದ್ ಇಡೀ ಊರಿಗೆ ಸಮ್ಮಂದ ಪಟ್ಟದ್ ಮತ್ತೆ ಒಗ್ಗಟ್ಟ್‌ನ ಕಷ್ಟ ಸುಖಲಿ ಸಹಕರಿಸುವ ಒಂದು ಮರ್ಯಾದೆ ಆಗುಟ್ಟುತ ಹಿರಿಯವು ಮಾಡ್ದ ಸಮಾಜದ ನಿಯಮತ ಹೇಳಕ್.

ಊರು ಮುಖ್ಯಸ್ತ ಆದರ್ನ ತಕಂಡ್ ವಾದ್ಯದವುಕೆ ಮಡಿವಾಳಂಗೆ, ಗಂಡ್‌ನ ಮದುವೆ ಆದ್ರೆ ಕ್ಷೌರಿಕಂಗೆ (ಹಜಾಮ) ವೀಳ್ಯ ಕೊಟ್ಟವೆ. ತಕ್ಷಣ ಮಡಿವಾಳ ಅವನ ಮರ್ಯಾದಿ ತಕಂಡ್ ಮೇಲ್ಕಟ್ಟ್ ತೇಳುವ ಬಿಳಿ ಬಟ್ಟೆನ ಸೀತಾವಳಿ, ಚಪ್ಪರಕ್ಕೆ ಕಟ್ಟಿದೆ. ಹಾಲೆ ಮರದ ಕಂಬದ ಬುಡಲಿ ಗಣ್‌ಪತಿಗೆ ಮಡ್ಗಿದೆ. ವಾದ್ಯದವು ಅವರ ಪೂಜೆ ಮಾಡಿಕಂಡ್ ವಾದ್ಯ ಮಾಡಿಕೆ ಸುರು ಮಾಡುವೆ, ಈಗ ಮದುವೆ ಮನೆಗೆ ಕಳೆ ಬಾತ್.

**ಇನ್ನ್ ಸ್ವಾದರ ಮಾವ ಕಸ್ತಾಳಿ ಕಟ್ಟುದು ಮತ್ತೆ ಎಣ್ಣೆ ಶಾಸ್ತ್ರ ಮಾಡುವ ಕ್ರಮ :** ಈಗ ಮನೆ ಯಜಮಾನ ಸ್ವಾದರ ಮಾವಂಗೆ ಕಸ್ತಾಳಿ ಕಟ್ಟಿಕೆ ನೀರ್ ಕೊಟ್ಟವೆ. ಎಲ್ಲವು ನೆಲ್ಲಕ್ಕಿ ಬಾಡೆಲಿ ಬಂದ್ ನಿಂತಮ್ಯಾಲೆ ಮದ್‌ಮಕ್ಕ ವರ ಆದರೆ ಬಿಳಿ ಪಂಚೆ ತಲೆಗೆ ಬಿಳಿ ಕೈ ವಸ್ತ್ರ ಹಾಕಿರೊಕು. ವಧು ಆದರೆ ಬಿಳಿ ಕಂಬಿ ಸೀರೆ ಉಟ್ಟು ತಲೆಗೆ ಚೆಕ್‌ನ ಮುಸುಕು ವಸ್ತ್ರ ಹಾಕಿರೊಕು. ನೆಲ್ಲಕ್ಕಿ ಅಡಿಲಿ ಒಂದು ಹಸೆ ಮಣೆ ಮತ್ತೆ ಒಂದು ಮುಕ್ಕಾಲ್, ಕಂಚ್‌ನ ಬಟ್ಲ್‌ಲಿ ಸ್ವಲ್ಪ ಅಕ್ಕಿ, ಐದ್ ಎಲೆ ಒಂದು ಹಣ್ಣಡಿಕೆ ಮಣ್ಣಿನ ದೀಪ, ಎಣ್ಣೆ ಚರಕ್‌ಲಿ ತೆಂಗಿನೆಣ್ಣೆ, ಆರ್‌ಶಿಣ ಹೊಡಿ ಒಂಬತ್ತು ಕೊಡಿನ 2 ಗರಿಕೆ ಹುಲ್ಲ್‌ನ ಕಟ್ಟ್‌ಗಳ ಮತ್ತೆ ಅಕ್ಕಿನ ಬ್ಯಾರೆ ತಟ್ಟೆಲಿ ಇಟ್ಟಿದ್ದವೆ.

ಚೊಂಬುಲಿದ್ದ ನೀರ್‌ನ ಮುಟ್ಟಿದ ಸ್ವಾದರ ಮಾಂವ ಎಲ್ಲವುಕೆ ಕೇಳುವಂಗೆ ಈಗ ಕಾಸ್ತಾಳಿ ಕಟ್ಟುವೆ ಎಲ್ಲವರ ಅನುಮತಿ ಉಟ್ಟಾ? ತಕೇಳ್ ಕಾಕನ ಅನುಮತಿ ಉಟ್ಟುತ ಹೇಳುವೆ. ಕಾಸ್ತಾಳಿ ತೇಳ್ರೆ ಮದ್ ಮಕ್ಕ ಮದುವೆಲಿ ಮೂರ್‌ದಿನ ಕುತ್ತಿಗೆಲಿ ಕಟ್ಟುವ ಗುರ್ತಿನ ಹವಳದ ಮಣಿತ ಅರ್ಥ ಮತ್ತೆ ಹತ್ತು ಕುಟುಂಬ ಹದ್ನೆಂಟು ಗೋತ್ರದ ದೇವ ಸಭೆ ಕೂಡ್ದ ಸಂಸಾರ ಸಂಗಡ ಕೇಳಿ ಮದ್ ಮಕ್ಕಳಿಗೆ ಸ್ವಾದರ ಮಾವ ಕಾಸ್ತಾಳಿ ಕಟ್ಟುವಂತೆಯೇ ತೇಳ್‌ಕಾಕನ ಅಲ್ಲಿದ್ದವೆಲ್ಲಾ ಒಳ್ಳೆ ಕಾರ್ಯವಂತೆಯೇತ ದನಿ ಕೂಡುವೆ. ಮತ್ತೆ ಎಣ್ಣೆಶಾಸ್ತ್ರಕ್ಕೆ ಮಣೆಮಾಲೆ ಕೂಡುವೆ.

**ಇನ್ನ್ ಮುಖ್ಯವಾಗಿ ಹೆಣ್ಣ್ ಮಕ್ಕಳ ಕೆಲಸನೆ ಆಗಿದ್ದದೆ :** ಮೊದ್ಲು ಹೆತ್ತವ್ವ ಬಂದ್ ವಿಳ್ಯದೆಲೆ ಅಡ್ಕೆನ ಕೈಗೆ ಕೊಟ್ಟ್ ದೇವ್ರ ದೀಪಕ್ಕೆ ಅಕ್ಕಿ ಹಾಕಿ ತಲೆಗೆ ಅಕ್ಕಿ ಶಾಸ್ತ್ರ ಮಾಡ್ದೆ ಪಾದ ಮೊಣಕಾಲ್, ಹೆಗಲ್, ತಲೆಗೆ 2 ಕೈಲಿ ಅಕ್ಕಿ ಹಿಡ್ದ್ ಮುಟ್ಟಿಸಿ, ತಲೆಗೆ ಅಕ್ಕಿ ಹಾಕುವೆ. ಎರಡ್ನೆ ಸಲ ಗರಿಕೆ ಹುಲ್ಲ್‌ನ ಕಟ್ಟ್‌ನ ಅದೇ ರೀತಿ ಮುಟ್ಟಿಸಿ ನಮಸ್ಕಾರ ಮಾಡುವೆ. ಮೂರ್ನೆ ಸಲಕ್ಕೆ ಎಣ್ಣೆನ ಅರ್‌ಶಿಣನ ಕೈಲಿ ಕಲ್ಸಿ ಕಂಡ್ ಎರ್ಡ್ ಕೈಲಿ ತಕಂಡ್ ಮುಂದೆ ಮುಖಕ್ಕೆ ಕಾಲಿಗೆ ಕೈಗೆ ಮತ್ತೆ ಮೈಗು ಉಜ್ಜುವೆ.

ಇದೆಲ್ಲಾ ಆದ ಮ್ಯಾಲೆ ವೀಳ್ಯದೆಲೆ ಅಡ್ಕೆನ ವಾಪಾಸ್ ತೆಗ್ದ್ ಬಟ್ಲಲ್ಲಿ ಮಡ್ಗಿ ನಮಸ್ಕಾರ ಮಾಡುವೆ. ಇದೇ ರೀತಿ 7-9 ಜನ ಹೆಂಗ್ಸರ್ ಶಾಸ್ತ್ರ ಮಾಡುವೆ. ನಮ್ಮ ಹತ್ತು ಕುಟುಂಬ ಹದ್ನೆಂಟ್, ಗೋತ್ರದವು ಎಲ್ಲಾ ಹೆಣ್ಣ್ ಮಕ್ಕಸನ ಕಲಿಯೊಕೆ ತೇಳುವ ಅಭಿಪ್ರಾಯಲಿ ಎಲ್ಲವುಕು ಅವಕಾಶ ಕಲ್ಪಿಸೊಳೊ.

ಈ ಶಾಸ್ತ್ರನ ಪ್ರತಿಯೊಬ್ಬ ಗೌಡನಾಗಿ ಹುಟ್ಟಿದವು ಅವರ ಪದ್ಧತಿ ಪ್ರಕಾರ ಮಾಡ್ಸಿಕೊಣಕು. ತನ್ನ ಅವ್ವಂದರ್ ಮಕ್ಕಳ ಹೆತ್ತ್‌ಸಾಕಿ ವಿದ್ಯ ಬುದ್ಧಿ ಕೊಟ್ರೆ ದೊಡ್ಡವನ್ನಾಗಿ ಮಾಡ್‌ದಕ್ಕೆ ಸಾರ್ಥಕ ಆದೆ. ಅವ್ವಂದರ್ ಈ ಶಾಸ್ತ್ರ ಮಾಡ್ ಕಾಕನ ಅವರವರ ಪ್ರಯತ್ನ ಫಲ ಕೊಟ್ಟಿತ್‌ತ ಹೃದಯ ತುಂಬಿ ಆಶೀರ್ವಾದ ಮಾಡ್ವೆ. ಮಕ್ಕಳಿಗೆ ಇದ್ಕಿಂತ ದೊಡ್ಡದ್ ಇನ್ನೇನ್ ಬೇಕು? ಅದರಿಂದಾಗಿ ಎಲ್ಲಾ ಗೂಡೆಗ, ಹೈದಂಗ ಸಹ ಈ ಪವಿತ್ರ ಕೆಲ್ಸನ ಉಪಯೋಗಿಸಿ ಕೊಳ್ಳುಕುತ ನಾವುತ್ತೇಳ್ರೆ ಕೊಡಗ್ ಗೌಡ ಒಕ್ಕೂಟದವು ಕೇಳಿಕೊಂಡವೆ.

**ಈಗ ಎಣ್ಣೆ ಶಾಸ್ತ್ರದ ಸೋಬಾನೆ :**

ಶಿವ ಶಿವಾ ಜಯಾ ಜಯಾ ಶ್ರೀ ಗೌರಿ, ಮನೋಹರಾ
ಕಾರುಣ್ಯ ಸಾಗರಾ ಕರುಣಾವ ಪತಿಯೇ( ವರ- ಪತಿಯೆ)
ಆಯುಳ್ಳ ಅರಿಶಿಣ ಛಾಯೆಯುಳ್ಳ ಎಣ್ಣೆಯಾ
ಎಣ್ಣೆಗೂ ಅರೆಶಿಣಕ್ಕೂ ರಜ ಬತ್ತಿ ರಜಮುಖಕೆ
ತೀಡಿದರು ನಾರಿಯರು ಶಂಕರನಾ.

ಇಂದ್ರಾಕ್ಷಿ : ಈ ಶಾಸ್ತ್ರಗಳ ಯಾಕೆ ಮಾಡುವೆ? ಮತ್ತೆ ಪ್ರಯೋಜನ ಏನಾರ್ ಗೊತ್ತುಟ್ಟ.

ಜಾನಕಿ : ಅಕ್ಕಿ ಶಾಸ್ತ್ರ ತೇಳ್ರೆ ವಧು ವರರ ದಾಂಪತ್ಯ ಜೀವನ ಸುಗಮ ಆಕುತ ಅಕ್ಕಿ ಹಾಕಿ ಹಾರೈಸುದು. ಅವರ ದಾಂಪತ್ಯ ಜೀವನಕ್ಕೆ ಶುದ್ಧವಾದ ಮನ್ಸ್ ಆರೋಗ್ಯಕರ ದೈಹಿಕ ಸಂಪತ್ತು ಇರಲಿತ ಎಣ್ಣೆ ಅರ್‌ಶಿಣ ಶಾಸ್ತ್ರ ಮಾಡುವೆ. ಈ ಶಾಸ್ತ್ರ ಆದ ಮ್ಯಾಲೆ ಅವರ ಮೊಖದ ಕಾಂತಿ ಜ್ಯಾಸ್ತಿ ಆದೆ. ಎಣ್ಣೆ ಆರ್‌ಶಿಣ ಮತ್ತೆ ಗರಿಕೆ ಹುಲ್ಲಲ್ಲಿ ರೋಗ ನಿರೋಧಕ ಶಕ್ತಿ ಉಟ್ಟುತ ಬಾಳ ಹಿಂದೆಂದ ಬಂದ ನಂಬಿಕೆ ಆಗುಟ್ಟು, ಅಂತಹ ಒಂದು ಉತ್ತಮ ಹಿಂದೂ ಸಂಸ್ಕೃತಿನ ಗೌಡ ಸಂಸ್ಕೃತಿಲಿ ನ್ನು ಉಳ್ಸಿಕೊಂಡು ಬಂದೊಳೊ. ಹಿಂಗಾಗಿ ಎಲ್ಲಕ್ಕಿಂತ ಮುಂದೆ ಹೆತ್ತವ್ವ ಅಕ್ಕಿ ಹಾಕಿ ಮತ್ತೆ ಎಲ್ಲವು ಸನ ಅಕ್ಕಿ ಹಾಕಿ ಹಾರೈಸುವೆ. ಈಗ ಗಂಡ್‌ನ ಮದುವೆ ಆದರೆ ಕ್ಷೌರಿಕ ಸಹ ಎಣ್ಣೆ ಶಾಸ್ತ್ರ ಮಾಡ್ವೆ. (ಯಾಕೆಂತೇಳ್ರೆ) ಲಗ್ನ ಕಟ್ಟಿದ ಮ್ಯಾಲೆ ಅಂವ ಮೊಖ ಚವರ ಮಾಡಿರುದುಲ್ಲೆ. ಅದ್ಕಾಗಿ ಕ್ಷೌರಿಕನ ಅಂದ್ ಕರ್‍ಸುವೆ.

ಈಗ ಕೇಳಿ ಕ್ಷೌರಿಕನ ಪಾತ್ರದ ಮಹತ್ವ. ಇದನ್ನ ಸೋಬಾನೆ ರೂಪಲಿ ಕೇಳೋನೊ – ಸೋಬಾನೆ.

ಅಂಗಳ ಸಾರಿಸಿ ರಂಗೋಲೆ ಬರೆದಿರುಸಿ...

ರಾಯಾವಣ್ಣಯ್ಯನಾ ಮದುವೆಗೆ ರಾಯಾವಣ್ಣಯ್ಯನಾ ಚವರ ದಾ ಕೆಲಸಕ್ಕೆ ನಾದಿಗ ನಿಲ್ಲಾ – ದೆ ವಧೂವಿಲ್ಲಾ.

# ಪಳಮೆ : ರಾಂಪಣ್ಣ v/s ಸೊಂಪಣ್ಣ

ಭಾಗ ಎರ್ಡ್

ಸೊಂ : ಹಾಂ! ನೀವು ಹೇಳ್ಕ್‌ನ ಗ್ಯಾನ ಬಾತ್ ನೋಡಿ ಆ ಪಟ್ಟಡ ಪ್ರಭಾಕರ್‌ನವು ಈ ಕೊಡಗು ಸಂಗಾತಿ ಪತ್ರಿಕೆನ ಹೆಂಗೊ ನಡ್ಸಿಕಂಡ್ ಈ ಐದು ವರ್ಷದವರೆಗೂ ನಡ್ಸಿಕಂಡ್ ಬಂದೊಳೊ.... ಇದರ ನಡ್ಸಿಕೆ ತುಂಬಾ ಜನ ಸಹಾಯನೂ ಮಾಡಿಯೊಳಗಡ, ಆದ್ರೆ ಇದ್ರಲ್ಲಿ 75% ಜನ ಬರಿ ಸಾಲ ಹೇಳಿಕಂಡೇ ಇವರ ಪತ್ರಿಕೆನ ತರ್ಸಿಕಂಡೊಳ ಗಡ. ಹಂಗಾಗಿ ಈಗ ಈ ಪತ್ರಿಕೆನ ನಡ್ಸಿಕೆ ಕಷ್ಟ ಆಗಿ ಸಾಲಲಿ ಬಿದ್ದೊಳ ಗಡ. ಹಿಂಗೆ ನಮ್ಮಲ್ಲಿ ಕೆಲವು ಜನ ಪುಕ್‌ಸಟ್ಟೆ ಸಿಕ್ರೆ ನಂಗೂ ಇರ್‍ಲಿ ನನ್ನ ಮಗ್ಳಗೂ ಒಂದಿರ್‍ಲಿ ತ್ತೇಳುವಂತ ಜನ.

ರಾಂ : ಹೌದಾ ಸೊಂಪಣ್ಣ ! ಈ ಪತ್ರಿಕೆನ ನಡ್ಸುವಕೆ ಸಾಲ ಆಗಿ ಹೋಗುಟ್ಟಾ? ಅದೆಂಗೆ ಸಾಲ ಆದೆ? ಎಲ್ಲವೂ ಹಣ ಕಳ್ಸಿ ಕೊಟ್ಟ ಮೇಲೆ ತಾನೆ ಅವು ಬುಕ್ಕ್‌ನ ಕಳ್ಸಿ ಕೊಡ್ದು?

ಸೊಂ : ಅದ್ ಹಂಗೆತ್ತೇಳಿ ನಮ್ಮವು ತುಂಬಾ ಜನ ಸ್ವಲ್ಪ ಹಣ ಕಳ್ಸಿ ಇದಕ್ಕೆ ಮೆಂಬರ್‌ಗೆ ಆದವೆ. ಆಮೇಲೆ ವಾಯಿದೆ ಮುಗ್ದು ಒಂದು ವರ್ಷ, ಎರಡ್ ವರ್ಷ ಆದ್ರೂನೂ ಹಣನ ಕಳ್ಸಿ ಕೊಡ್ದುಲೆ. ಆಮ್ಯಾಲೆ ದೊಡ್ಡ ಗಂಟ್‌ನಷ್ಟ್ ಬಾಕಿ ನಿಂತಾಕನ ಆ ಹಣನ ಕಳ್ಸಿಕೇ ಹೆದರಿಕಂಡವೆ. ಹಿಂಗಾಗಿ ಈಗ ಅವುಕೆ ಹೆಚ್ಚು ಕಮ್ಮಿ 2-3 ಲಕ್ಷಕ್ಕಿಂತ ಹೆಚ್ಚ್ ರೂಪಾಯಿ ಬಾಕಿ ನಿತ್ತುಟ್ಟು ಗಡ

ರಾಂ : ಅಯ್ಯೋ ಶಿವನೆ ಅಷ್ಟೊಂದ್ ಹಣ ನಮ್ಮ ಓದುಗರಲ್ಲಿ ಬಾಕಿ ಉಟ್ಟಾ? ಇದ್ ಬಾಳಾ ಜಾಸ್ತಿ ಆತ್. ಹಿಂಗೆ, ನೋಡಿ ನಮ್ಮ ಜನ ಬಂಡೆಮ್ಮೆ ಹಾಲು ಬಂದಷ್ಟ್ ಆತ್ ತೇಳ್ವಂಗೆ. ಓದಿಕೆ ಪತ್ರಿಕೆನ ತರ್ಸಿಕಂಡ್ ದುಡ್ಡು ಕೊಡಿಗೆ ಬಾಕಿ ಉಳ್ಸಿ ಕಂಡಳೋಲಾ? ಅವು ಎನ್ ಒಬ್ಬೊಬ್ಬರ ಮನೆಗೂ ನನ್ನ ದುಡ್ಡ್ ಬಾಕಿ ನಿಂತುಟು, ತಾ ಕೇಳಿಕೆ ಹೊಕೆ ಆದ್ಯಾ? ಹಿಂಗೆ ಇಷ್ಟ್ ದೂರಕೆಲ್ಲಾ ಅವು ಕೇಳಿಕೆ ಬಾಕಿಲ್ಲೆ ತ್ತೇಳಿಕಂಡೇ ಇವು ದುಡ್ಡ್‌ನ ಕಳ್ಸಿಕೊಡದೆ ಸುಮ್ಮನೆ ಕುದ್ದ್ ಬುಟ್ಟೊಳೊ ಕಂಡದೆ.

ಏನಾದ್ರೂ ಆಗಲಿ ಪಾಪ ನಮ್ಮ ಜನಲಿ ಜಾಗೃತಿ ಮೂಡ್ಲೋನತ ಇವು ಗ್ಯಾನ ಮಾಡ್ಲೊ, ಈಗ ನೋಡ್ರೆ ಊರಿಗೆ ಉಪಕಾರ ಮಾಡಿಕೆ ಹೋಗಿ ತಲೆ ಮೇಲೆ ಸಾಲ ಹೊತ್ತ್‌ಕಂಡ್ ಬುಟ್ಟೊಲ್ಲಾ, ಚೆ. ಪಾಪ ನಮ್ಮ ಜನರ ಎಂದಿಗೂ ನಂಬಿಕಾದುಲೆ ನೋಡಿ ಸೊಂಪಣ್ಣ.

ರಾಂ : ಪಾಪ ಈ ಪಟ್ಟಡಂವ. ನಮ್ಮ ಜನ ಹಿಂಗೆ ಮೋಸ ಮಾಡಿವೆತ್ತೇಳಿ ಮೊದ್ಲೇ ಗೇನ ಮಾಡಿತ್ಲೆ ಕಂಡದೆ. ಬೆಳ್ಳಗಿರ್‍ದು ಎಲ್ಲಾ ಹಾಲಲ್ಲ ತೇಳು ಇದ್‌ಕೇ ನೋಡಿ, ತಾ ಹೇಳಿಕಾಕನ ಈ ಬಸ್ ಮಡಿಕೇರಿ ಸ್ಟ್ಯಾಂಡ್ ಹತ್ರಕ್ಕೆ ಬಾತ್. ಮಡಿಕೇರ್‍ರಿ ಬಸ್‌ನಿಂತಂಗೆ ಇಬ್ಬರೂ ಇಳ್ದ್ ಬಸ್ ಸ್ಟ್ಯಾಂಡ್ ಹೊಟೇಲ್ ಒಳಗೆ ನುಗ್ಗಿದೊ.ಅಲ್ಲಿ ಬಸ್ 20 ನಿಮಿಷ ನಿಂತಿದ್ದ್; ಅಲ್ಲಿಂದ ಮೈಸೂರು ಕಡೆಗೆ ಹೊರಡಿಕೆ ರೆಡಿ ಆತ್. ಇಳ್ದ ಜನ ಎಲ್ಲಾ ಪುನಃ ಬಸ್‌ನ ಒಳಗೆ ತುಂಬಿಕಂಡೊ. ಬಸ್ ಅಲ್ಲಿ ಮೊಟ್ಟೆ ಹತ್ತಿ ಟೋಲ್‌ಗೇಟ್ ದಾಟಿ ಕಾಕನ ಬಸ್ ಒಳಗೆ ಕುದ್ದ ಜನರ ಗಲಾಟೆಗ ಎಲ್ಲಾ ಸ್ವಲ್ಪ ಕಮ್ಮಿ ಆತ್.

ಸೊಂ : ನೋಡಿ ರಾಂಪಣ್ಣ ನಮ್ಮ ಕೊಡಗರ ಒಗ್ಗಟ್‌ನ ಮುಂದೆ ನಮ್ಮ ಜನ ಇಲ್ಲೆ. ಅವರಲ್ಲಿ ನೋಡಿ ಇಂತ ಸಮಾಜ ಸೇವೆ ಕೆಲಸಕ್ಕಾದ್ರೆ ಅವು ನಾನ್ ಮುಂದ್, ತಾನ್ ಮುಂದು ತ್ತೇಳಿಕಂಡ್ ಬಂದ್ ಸಹಾಯ ಮಾಡಿವೆ. ಅವರಲ್ಲಿ ಜನರ ಏಳಿಗೆ ಗೋಸ್ಕರ ಕೆಲಸ ಮಾಡುವುಕೆ ತುಂಬಾ ಸಹಾಯ ಮಾಡಿವೆ. ಇಂತಹ ಕೆಲ್ಸಗಳಿಗೆಲ್ಲಾ ಬೇಕಾಗುವಷ್ಟು ಹಣನ ಸಹಾಯ ಮಾಡಿವೆ. ಅಂವ ದುಡ್ಡ್‌ನ ತೀಂತ್ ಇಂವ ತಿಂದ್ ಬುಡ್ತ್‌ತ್ತ ಒದ್ದಾಡುದಿಲ್ಲೆ. ಹಂಗಾಗಿ ನೋಡಿ ಅವರ ಜನ ಎಲ್ಲಾ ಒಗ್ಗಟ್ಟ್‌ಲ್ ಸೇರಿಕಂಡ್ ಎರಡ್ ದಪ್ಪ ಡೆಲ್ಲಿಗೆ ಮುಟ್ಟ ಹೋಗಿ ಪ್ರಧಾನ ಮಂತ್ರಿಗಳ ಕಂಡೆ ಬಂದೊಳೊ. ಹಂಗಾಗಿ ಈಗ ಅವರಲ್ಲಿ ಕೊಡವರದೇ ಬೇರೆ ಆಗಿ ಒಂದ್ ಕೊಡವ ಅಕಾಡಮಿನೆ ಮಾಡಿಕಂಡೊಳೊ. ಇದ್ರಂದ ಅವ್ರ ಜನಿಕೆ ಬೇಕಾದಷ್ಟು ಸಹಾಯನ, ಅನುಕೂಲತೆನ ಮಾಡಿಕಂಡಳೊ.

ನಮ್ಮವುಕೆ ಸ್ವಂತ ಬುದ್ಧಿ ಇಲ್ದೇ ಇದ್ರೂ ಅವರನ್ನ ನೋಡಿ ಆದ್ರೂ ಕಲ್ತ್ ಕಂಬೊಕಲ್ಲಾ ರಾಂಪಣ್ಣ. ನಮ್ಮ ಜನರಲ್ಲಿ ಇನ್ ಯಾವ ಕಾಲಕ್ಕೆ ಸ್ವಾಭಿಮಾನ ಮೂಡ್ದುತಾ? ಥ್! ನಮ್ಮ ಜನರ ಗುಣನ ಹೇಳಿ ಕಂಬಕೂ ನಾಚಿಕೆ ಆದೆ. ನಮ್ಮ ಜನರಲ್ಲಿ ಹೊಟ್ಟೆ ಕಿಚ್ಚ್ ಪಡವೇ ಜಾಸ್ತಿ ಕಂಡದೆ.

ರಾಂ : ಸೊಂಪಣ್ಣ ಅದಿರ್‍ಲಿ, ನಮ್ಮ ಜನಾಂಗದ ಈ ಒಂದೇ ಒಂದ್ ಪತ್ರಿಕೆ ಕೊಡಗ್ ಸಂಗಾತಿನ ಈಗ ನಾವು ಉಳ್ಸಿ ಕೊಂಬೋದರ ಬಗ್ಗೆ ಸ್ವಲ್ಪ ವಿಚಾರ ಮಾಡಿ. ಇದೊಂದ್ ಪತ್ರಿಕೆ ಮುಂದಕ್ಕೆ ಉಳ್ದರೆ ಮಾತ್ರ ನಮ್ಮ ಜನರ ಸಂಘಟನೆ ಮಾಡಿಕೆ ಸ್ವಲ್ಪನಾದ್ರೂ ಸಹಾಯ ಆದೆ. ಕೊನೆಗೆ ಇದೂ ಇಲ್ಲೆತ್ತೇಳಿರೆ ಇನ್ನ್ ನಮ್ಮ ಜನ ಸತ್ತಂಗೆ ಆಗಿ ಹೋದೆಲ್ಲಾ?

ಸೊಂ : ನೋಡಿ ರಾಂಪಣ್ಣ ಎಲ್ಲದಕ್ಕೂ ಒಂದ್ ಪರಿಹಾರತ್ತೇಳಿ ಇದ್ದೇ ಇದ್ದದೆ. ಆದ್ರೆ ನನ್ನ ಮನ್ಸಲಿ ಇರುವ ಅಭಿಪ್ರಾಯನ ಹೇಳಿರೆ ನೀವು ಒಪ್ಪೊಕಲ್ಲಾ? ಅಥವಾ ಆ ಪತ್ರಿಕೆ ನಡ್ಸವು ಒಪ್ಪಕಲ್ಲಾ?

ರಾಂ : ಹೇಳಿ ಹೇಳಿ ನಿಮ್ಮ ಅಭಿಪ್ರಾಯ ಏನ್‌ತಾ ಹೇಳಿ, ವಟ್ಟಿಗೆ ಈ ಜನಾಂಗದ ಪತ್ರಿಕೆ ಮುಂದಕ್ಕೂ ಇನ್ನೂ ಲಾಯಕು ನಡಿವಂಗೆ ಆಕು. ನಮ್ಮ ಜನರ ಸಂಘಟನೆಗೆ ಈಗ ಇದು ಇದೊಂದೇ ಆಶಾಕಿರಣ ಕುಡಿ. ಇದೂ ಏನಾದ್ರೂ ನಿಂತ್ ಹೋದ್ರೆ ಮತ್ತೆ ಮುಂದಕ್ಕೆ ನಮ್ಮ ಜನಾಂಗವು ನಾಡ್‌ಲಿ ಆಗಲೀ ಹೊರಗಡೆ ಹೋಗಿದ್ದವು ಆಗಲಿ, ಎಲ್ಲಾ ಇದ್ದೂ ಇಲ್ಲದಂಗೆ ಆಗಿ ಹೋದವೆಲ್ಲಾ? ನಮ್ಮ ಜನಾಂಗದ ಬಗ್ಗೆ ಈ ಪತ್ರಿಕೆಂದ ಅಲ್ಪ ಸ್ವಲ್ಪನ್ನಾದ್ರೂ ಪರಿಚಯಗ, ವಿಚಾರ ವಿನಿಮಯ ನಡಿಯುತ ಉಟ್ಟು, ಎನ್ ಹೇಳ್ರಿ ಸೊಂಪಣ್ಣ?

ಸೊಂ : ನಾನ್ ಹೇಳ್ದು ಎನ್‌ತ್ತೇಳಿರೆ!! ಸುರೂಲಿ ಈ

ಕೊಡಗು ಸಂಗಾತಿ ಪತ್ರಿಕೆ ನಮ್ಮ ಸರ್ವ ಜನಾಂಗದ ಪತ್ರಿಕೆ ಆಗಿ ಮೈದುಂಬಿ ಬಾತ್. ಈಗಳೂ ಹಂಗೆ ನೇ ಬರ್ತ ಉಟ್ಟು. ಇದರಲ್ಲಿ ಕಷ್ಟಾನೋ ಸುಖಾನೋ ಈ ಪಟ್ಟಿಡ ಪ್ರಭಾಕರ್ ಶೀಲಮಣಿ ಯವ್ವೆ ಇದರ ನಿಭಾಯಿಸಿಕಂಡ್ ಬರ್ತಾಒಳೊ. ಆದ್ರೆ ಅವುಕೆ ನಮ್ಮ ಜನರಿಂದ ಹೊರೆ ಬೀಳ್ತ ಉಟ್ಟು, ಮತ್ತೆ ಕೆಲವು ಎನ್ ತಿಳ್ಕೊಂಡೊಳತ್ತೇಳಿರೆ ಈ ಪತ್ರಿಕೆಂದ ಇವುಕೆ ಒಳ್ಳೆ ಲಾಭ ಉಟ್ಟುತ ಗ್ಯಾನ ಮಾಡಿಕೊಂಡೊಳೊ. ಇವ್ಕೆ, ಕೆಲವು ಹೇಳ್ತಾಒಳೊ. ಈ ಪತ್ರಿಕೆ ಅವರ ಸ್ವಂತದ್ದ್. ಇದೇ ಒಂದ್ ವ್ಯಾಪಾರ ತರ ಮಾಡಿ ಕಂಡೋಳತ. ಇದೆಲ್ಲಾ ಏನೇ ಇರ್ಲಿ. ಇದ್ ನಮ್ಮ ಜನಾಂಗದ ಪತ್ರಿಕೆ, ನಮ್ಮ ಜನರಲ್ಲಿ ಒಳ್ಳೆ ತಿಳುವಳಿಕೆ ಮೂಡಿಕೆ ಮಾಡುವಂತಹ ಪ್ರಯತ್ನ, ಆದ್‌ದರಂದ ಈ ಪತ್ರಿಕೆನ ನಮ್ಮ ಗೌಡ ಸಮಾಜದವು ಈ ದಿಸೆಲಿ ಶ್ರಮ ಪಡೊಕು. ಇಲ್ಲೆ ಇದರ ಒಂದು ಗೌಡ ಸಾಹಿತ್ಯ ಅಕಾಡೆಮಿತ್ತೇಳಿ ಒಂದು ವೇದಿಕೆ ಮಾಡಿ ಕಂಡ್, ಹತ್ತಾರು ಜನ ಸೇರಿಕಂಡ್ ಈ ಪತ್ರಿಕೆಯ ಜವಾಬ್ದಾರಿನ ತಕಂಬೊಕು. ಈ ಪತ್ರಿಕೆನ ಪ್ರಕಟಿಸಿ ನಮ್ಮ ಜನರಿಗೆಲ್ಲಾ ಮುಟ್ಟಿಸಿಕೆ ಒಂದ್ ಕೈಲಿ ಮಾಡ್ವಕೆಲ್ಸ ಇದ್ ಅಲ್ಲ. ನಮ್ಮಲ್ಲಿಯ ಬುದ್ಧಿವಂತ ಜನ, ಸಂಘಟನೆ ಮಾಡ್ವಂತಹ ಮನಸಿದ್ದ ಜನ ಈ ಪತ್ರಿಕೆಯ ಜವಾಬ್ದಾರಿನ ಹೊತ್ತ್‌ಕಂಡರೆ ಈ ಪತ್ರಿಕೆ ಕಂಡಿತಾ ಉದ್ಧಾರ ಆದೆ. ಮತ್ತೆ ನಮ್ಮ ಹೆಚ್ಚಿನ ಜನಕ್ಕೆ ಇದರಿಂದ ಪ್ರಯೋಜನ ಆದೆತಾ ನನ್ನ ಅಭಿಪ್ರಾಯ ರಾಂಪಣ್ಣ. ಈಗ ಇದರ ಬಗ್ಗೆ ನಿಮ್ಮ ಅಭಿಪ್ರಾಯ ಏನ್ ತ್ತೇಳಿರೆ ರಾಂಪಣ್ಣ.

ರಾಂ : ಹೌದು ಸೊಂಪಣ್ಣ, ನೀವು ಹೇಳ್ದು ನಿಜ ಕಂಡದೆ. ನಾನೂ ಕೂಡಾ ಎಷ್ಟೋ ಜನರ ಬಾಯಿಲಿ ಹೇಳ್ದು ಕೇಳ್ಳೊಳೆ ಎನ್‌ತ್ತೇಳಿರೆ,

ಈ ಪತ್ರಿಕೆಲಿ ಎಂತ ಉಟ್ಟು ಓದಿಕೆ. ಸರಿಯಾದ ಒಂದು ಬರವಣಿಗೆನೂ ಇದರಲ್ಲಿ ಇಲ್ಲೆ. ಈ ಪುಸ್ತಕಲಿ ಅರ್ದಮಟ್ಟ ನಮ್ಮ ಹಳೆ ಕಾಲದ ವಿಚಾರಗಳ ಹಾಕಿದ್ದವೆ. ಯಾವುದೊ ಚೂರು ಚೂರು ಕಥೆಗಳ ಹಾಕಿದ್ದವೆ, ಎಲ್ಲಾ ಸಪ್ಪೆ, ಜೋಕ್ಸ್‌ಗಳ, ಕವನಗಳ ಹಾಕಿವೆ. ಎನ್ ನಮ್ಮಲ್ಲಿ ಒಳ್ಳೆ ಬರಹಗಾರ ಜನನೇ ಇಲ್ಲೆನಾ? ಇದಕ್ಕಿಂತ ಬೇರೆ ವಾರ ಪತ್ರಿಕೆಗಳ ನೋಡಿ. 6 ರೂಪಾಯಿ ಕೊಟ್ಟರೂ ಎಷ್ಟೊಂದ್ ವಿಚಾರಗಳ ಕೊಟ್ಟಿದ್ದವೆ. ಎಷ್ಟೊಂದ್ ಕಾದಂಬರಿಗಳ ಹಾಕಿದ್ದೀವೆ. ಈ ವಾರ ಓದಿದವು ಪುನಃ ಮುಂದಿನ ವಾರಕ್ಕೆ ಆ ಬುಕ್ಕಿಗೋಸ್ಕರ ಕಾದಿದ್ದವೆ. ಅದರಂಗೆ ಎಕೆ ಇವುಕೆ ಮಾಡಿಕಾದ್ಲೆತಾ ಹೀಯಾಳಿಸಿವೆ ಗಡ.

ಸೊಂ : ನೀವು ಹೇಳ್ದು ಸರಿ ರಾಂಪಣ್ಣ ಬೇರೆ ವಾರ ಪತ್ರಿಕೆಗಳಲ್ಲಿ ಹಂಗಿದ್ದದೆ, ಹಿಂಗಿದ್ದದೆ, ಅಷ್ಟೊಂದು ಪೇಜ್ ಇದ್ದದೆ, ಅಷ್ಟೊಂದ್ ತರ ತರದ ವಿಚಾರ ಇದ್ದದೆ. ಎಲ್ಲಾ ಸರಿ. ಆವ್ರದ್ ಲಕ್ಷಾಂತರ ಜನ ದುಡ್ಡ್ ಕೊಟ್ಟ್‌ತಕಂಡ್ ಓದಿವೆ. ಆದ್ರೆ ಈ ಪತ್ರಿಕೆಗೆ ನಮ್ಮ ಜನರಲ್ಲಿ ಬರಹಗಾರರ್ ಕಮ್ಮಿ ಒಳೊ. ಅವರವರ ಅಳತೆಲೆ ಅವವು ಬರ್ದವೆ. ಅಲ್ಲದೆ ಈ ಕೊಡಗು ಸಂಗಾತಿ ಪತ್ರಿಕೆನ ಜನ ಸಾಲ ನಿಲ್ಸಿಕಂಡ್ ಅವರವರ ಮನೆಗಳಿಗೆ ಪೋಸ್ಟ್ ಮುಖಾಂತರ ತರ್ಸಿಕಂಡವೆ. ಹಿಂಗಾಗಿ ಈ ಪುಸ್ತಕನ ದೊಡ್ಡದ್ ಮಾಡಿಕೇ ಸಧ್ಯಕೆ ಆದುಲೆ. ಇರ್ದುದರಲ್ಲೇ ಕಷ್ಟ ಪಟ್ಟ್‌ಕಂಡ್ ಇಷ್ಟ್ ಮಾಡಿ ಕಳ್ಸಿಕೊಟ್ಟವೆ. ಹಂಗಾಗಿ ಒಬ್ಬನ ತಲೆ ಮೇಲೆ ಈ ಹೊರೆ ಬಿದ್ದುಟು.

ರಾಂ : ಈಗ ಗೌಡ ಸಾಹಿತ್ಯ ಅಕಾಡೆಮಿ ಅಥವ ಗೌಡ ಬರಹಗಾರರ ಕೂಟತ ಮಾಡಿ, ಈಗ ಹಾಲಿ ನಮ್ಮ ಜನಾಂಗದವುಕೆ ಇರ್ವ ಗೌಡ ವಿದ್ಯಾಸಂಘ, ಕೊಡಗು ಎಜುಕೇಷನ್ ಅಕಾಡೆಮಿ, ಕೊಡಗು ಗೌಡ ಮಹಿಳೆಯರ ಒಕ್ಕೂಟ ಎಲ್ಲಾ ಆಗುಟ್ಟು. ಇಷ್ಟೆಲ್ಲಾ ಆದ್ರೂ ನಮ್ಮ ಜನಾಂಗಲಿ ಎಲ್ಲವೂ ಒಂದಾಗಿ ಒಂದೇ ವೇದಿಕೆ ಮೇಲೆ ಸಂಘಟನೆ ಆಗಿ ಬರ್ತಾ ಇಲ್ಲೆ. ಎಲ್ಲದಕ್ಕೂ ನಮ್ಮ ನೆಲೆ, ನಮ್ಮ ವಿಚಾರದ ಬಗ್ಗೆ ಇರುವ ಜ್ಞಾನದ ಕೊರತೆ ಕಾರಣ. ಇದರ ಹೊಂದಿಸಿಕೆ ಈ ಒಂದೇ ಒಂದ್ ಇರುವ ಪತ್ರಿಕೆಯ ಮಾಧ್ಯಮ. ಇದು ಈಗ ಸೊರಗಿ ಹೋಗುತ್ತಾ ಉಟ್ಟು. ಆದರಿಂದ ಈ ಮೇಲಿನ ಸಂಘಗಳ ಜನ ಎಲ್ಲಾ ಸೇರಿಕಂಡ್ ಒಂದ್ ಗೌಡ ಸಂಘಟನೆಯ ಅಕಾಡೆಮಿ ತಾ ರಚಿಸಿಕೊಂಡ್ ಅದರ ಮೇಲ್ವಿಚಾರಕರ್‌ಗ ಈ ಪತ್ರಿಕೆ ಮಾಧ್ಯಮನ ವಹಿಸಿ ಕಂಡರೆ ಸರಿ ಅದು ಕಂಡದೆ. ಈಗ ನಾವು ನೋಡ್ದಂಗೆ ಕೊಡಗ್‌ರ್ ಬಹಳ ಪ್ರಯತ್ನಮಾಡಿ ಈಗ ಅವರದೇ ಆದ ಕೊಡವ ಸಾಹಿತ್ಯದ ಒಂದ್ ಅಕಾಡೆಮಿನ ಮಾಡಿಕೊಂಡೊಳೊ. ಈ ಅಕಾಡೆಮಿನ ನಡ್ಸಿಕೋಸ್ಕರ ಅವುಕೆ ನಮ್ಮ ಸರ್ಕಾರಂದ ಲಕ್ಷಾಂತರ ರೂಪಾಯಿ ಹಣದ ಸಹಾಯ ಮಾಡ್ಯೊಳೊ. ಹಂಗಾಗಿ ಅವರಲ್ಲಿ ಈಗ ಒಮ್ಮತ, ಒಗ್ಗಟ್ಟು, ಬೆಳ್ದುಟ್ಟು. ಕೊಡವ ಸಾಹಿತ್ಯ ಸಂಸ್ಕೃತಿ ಕೂಡ ಲಾಯಕ್ಕಲಿ ಬೆಳೆಯುತಾ ಉಟ್ಟು. ಆದ್ರೆ ನಮ್ಮ ಗೌಡ ಜನಾಂಗ ಅವರ ಕಾಲುಭಾಗ ಕೂಡಾ ಬೆಳಕಿಗೆ ಬಾರದೆ, ಹಿಂದೆ ಸರ್ದಳೊ, ನಮ್ಮ ದೇಶ ಇಷ್ಟೊಂದು ಮುಂದುವರ್ದರೂ ನಮ್ಮ ಜನ ಮಾತ್ರ ಇನ್ನೂ ಬಾವಿ ಒಳಗೆ ಇದ್ದಂಗೆ ಒಳೊ. ನಮ್ಮಲ್ಲಿ ಕೆಲವೆ ಕೆಲ ಜನ ಮಾತ್ರ ಮುಂದುವರ್ದಳೊ ಹೊರ್ತು ನಮ್ಮ ಜನ ಸಮೂಹ ಮುಂದುವರ್ತಲೆಲ್ಲಾ ತಾ ನಂಗೆ ದುಃಖ ಆದೆ ಸೊಂಪಣ್ಣ .

ಸೊಂ : ಎಷ್ಟೆ ಆದ್ರೂನು ರಾಂಪಣ್ಣ ನಮ್ಮ ಜನರಲ್ಲೇ ನಾವು, ನಮ್ಮದ್, ನಮ್ಮ ಜನತ್ತೇಳುವ ಅಭಿಮಾನ ಅವರವರ ಮನ್ಸಲೇ ಮೂಡಕು, ನಮ್ಮ ಜನ ಸೊಡ್ಡರಂಗೆ ಹಿಂದೆ ನಿಂತ್‌ಕಂಡರೆ ಆದುಲ್ಲೆ. ಕುದರೆಗೆ ನೀರ್‌ನ ತೋರ್ಸಕ್ ಆದಕ್ಕೆ ಕುಡ್ಸಿಕಾದ್ಯೆಯೊ. ಹಂಗೆ ನಮ್ಮ ಜೆನ. ಯಾರೋ ಒಬ್ಬ ಒಳ್ಳೆದ್ ಮಾಡಿಕೆ ಪ್ರಯತ್ನ ಮಾಡಿರೆ ಅಂವನ ಮೇಲೆನೆ ನಮ್ಮ ಜನ ಗೂಬೆ ಕೂರ್ಸಿವೆ. ನಮ್ಮ ಈಗಿನ ಯುವ ಜನರಲ್ಲಾದ್ರೂ ನಾವು ನಮ್ಮ ಜಾತಿ, ನಮ್ಮ ಭಾಷೆ ತ್ತೇಳುವ ಹುಮ್ಮಸ್ಸು ಅವರವರ ಎದೆಲಿ ಬರೋಕು. ಇದರ ಉಳ್ಸಕು ಬೆಳ್ಸಕುತ್ತೇಳುವ ಹಠ ಬೇಕ್. ನಮ್ಮ ಹಲವಾರು ಸಮಾಜ ಸೇವಕರ ಜೊತೆಗೆ ಬಂದು ಸೇರಿ ಕಂಬಕು. ನಮ್ಮ ಜನತ್ತೇಳುವ ಅಭಿಮಾನನ ಮಾಡ್ಕಿಂಡ್ ಸಹಾಯ ಮಾಡಕು. ಬೇರೆಯವರ ಸಂಸ್ಕೃತಿನ ಅನುಕರಣೆ ಮಾಡುದೇ ದೊಡ್ಡಸ್ತಿಕೆತ ತಿಳ್ಕಂಬದು ತಪ್ಪಾದೆ.

ವಿಶ್ವದಲ್ಲಿ ಅತ್ಯಂತ ಕಹಿಯಾಗಿರುವ ಪದಾರ್ಥ ಬೀ ಟ್ರೆಕ್ಸ

ನಾವು, ನಮ್ಮವು, ನಮ್ಮ ಸಂಸ್ಕೃತಿ ಮುಂದುವರಿಯಕು ನಾವೂ ಕೂಡಾ ಬೇರೆಯವರಂಗೆ ದೊಡ್ಡ ಮನುಷ್ಯರಾಗಿ ನಮ್ಮ ಜನಾಂಗದವುಕೆ ಮಾದರಿ ಜನ ಆಕು. ಒಟ್ಟ್‌ಲಿ ಹೇಳ್ದು ಆದರೆ ನಮ್ಮವಕೆ ಸಹಾಯ ಮಾಡಿಕೆ ಆಗದಿದ್ದರೂ ಸಮಾಜಕ್ಕೆ ದುಡಿಯುವವರ ಕಾಲ್‌ನ ಹಿಡ್ದ್ ಎಳೆಯುವ ಕೆಲ್ಸನ ಮಾಡಿಕ್ಕಾಗದ್.

ರಾಂ : ನೀವು ಇಷ್ಟೆಲ್ಲಾ ಹೇಳ್ದರಲ್ಲಾ ಈ ಬೋಧನೆಗಳನ್ನೆಲ್ಲಾ ನಾವು ಹೋಗಿ ಹೋಗಿ ನಮ್ಮ ಜನಿಕೆ ಹೇಳಿಕ್ಕಾದ್ಯೆ? ಅದ್‌ಕ್ಕೆ ಹೇಳ್ದು ಈ ಪತ್ರಿಕೆ ಮುಖಾಂತರ ಜನರ ಮನ್ಸಿಗೆ ತಿಳ್ಸಿಕೆ ಸಾಧ್ಯ ಉಟ್ಟುತಾ ಆದ್ರೆ ಈ ಪತ್ರಿಕೆ ಕೊಡಗು ಸಂಗಾತಿ ನಮ್ಮ ಪತ್ರಿಕೆ ನಮ್ಮ ಜನಾಂಗದ ಪತ್ರಿಕೆತಾ ನಾವೆಲ್ಲಾ ತಿಳ್ಕಂಡ್ ಉಳ್ಸಿಕೊಂಡ್ ಇದರ ಅಭಿವೃದ್ಧಿಗೆ ಈಗ ನಮ್ಮ ಜನ ಮನಸ್ಸ್ ಮಾಡೋಕು, ಇದ್‌ಕ್ಕೋಸ್ಕರ ನಮ್ಮವು ಅತ್ತ ಇತ್ತ ತೆಗಳಿ ಕಣಿದೆ ಒಂದ್ ನಿರ್ಧಾರಕ್ಕೆ ಬರೋಕು,.

ಸೋಂ : ಇದ್‌ಕೆ ಈಗ ಎನ್ ಮಾಡೋಕು? ಹಿಂಗೆ ಮಾಡೋಕು? ತಾ ನಂಗೆ ಇನ್ನೂ ಮನ್ಸಿಗೆ ಐಡಿಯಾನೆ ಹೊಳ್ತ್‌ಲೆಲ್ಲಾ, ಈಗ ಏನ್ ಮಾಡುದೂತಾ?!!

ರಾಂ : ಈಗ ಏನೂ ಮಾಡಿಕಾದ್ನೆ. ನಾವು ಊರಿಗೆ ಹೋದ ಮೇಲೆ ನಮ್ಮ ಸಂಘದ ಮೆಂಬರುಗಳ ಹತ್ರ ಮಾತಾಡಿ ನಮ್ಮ ಜನಾಂಗದ ಸಂಗಟನೆಗೆ ನಮ್ಮ ಕೊಡಗು ಸಂಗಾತಿ ಪತ್ರಿಕೆ ಬಹಳ ಅವಶ್ಯ ಉಟ್ಟುತ ಅವರ ಮನ್ಸಿಗೆ ಹಾಕೂದು. ನಮ್ಮ ಜನಾಂಗಕ್ಕೆ ಒಂದು ಗೌಡ ಸಾಹಿತ್ಯ ಅಕಾಡೆಮಿ ತೇಳ್ದುದರ ಹುಟ್ಟು ಹಾಕಕುತ ಒತ್ತಾಯ ಮಾಡೋಕು. ಆವ್‌ಲೆ ಈ ಅಕಾಡೆಮಿಯವರ ಮೇಲ್ವಿಚಾರಣೆಲಿ ನಮ್ಮ ಜನಾಂಗದ ಸಂಘಟನೆ ಸಂಸ್ಕೃತಿ, ಸಾಹಿತ್ಯ ಬೆಳೆಯುವಂಗೆ ಏರ್ಪಾಡ್ ಮಾಡೋಕು. ಹಿಂಗೆ ನಮ್ಮವರ ಮನ್ಸಲಿ ಜಾಗೃತಿ ಮೂಡ್ಸಿ ನಾವು ಕೂಡಾ ಬೇರೆ ಜನಾಂಗದವರೊಟ್ಟಿಗೆ ಅವರ ಸರಿಸಮಾನಕೆ ನಿಲ್ಲಿಕೆ ಪ್ರಯತ್ನ ಮಾಡೋಕು.

– ಶಂಕರನ ಬಸಪ್ಪ

---

9ನೇ ಪುಟದಿಂದ

ಸಂಪಾದಿಸುತ್ತಾರೆ. ಕಾರಣ, ಇವರೆಲ್ಲರೂ ಕುರಿಮಂದೆಯಂತೆ ಕಣ್ಣುಮುಚ್ಚಿ ಗುಂಪಿನೊಂದಿಗೆ ನಡೆಯದೆ ಛಲತೊಟ್ಟು ಬೇರೆಯವರು ಬಳಸದ ರಿಸ್ಕ್ ದಾರಿಯನ್ನು ಆಯ್ದುಕೊಂಡು ಗೆದ್ದು ತೋರಿಸಿದರು.

ಆದ್ದರಿಂದ ನಮ್ಮ ಬುದ್ಧಿವಂತ ಯುವಕರು ತಮ್ಮ ವಿದ್ಯಾರ್ಹತೆಗೆ ತಕ್ಕ ಕೆಲಸ ಸಿಕ್ಕಿಲ್ಲಾ ಎಂದು ಕೊರಗುತ್ತಾ ಕೂಡುವ ಬದಲು, ಕೂಡಲೆ ತಮಗೆ ಇಚ್ಛೆಯಿರುವ ವಿಷಯದಲ್ಲಿ ತರಬೇತು ಪಡೆದು ಉಪ-ಉದ್ಯೋಗದಲ್ಲಿ ತೊಡಗಬೇಕು. ಬೇರೆಯವರ ಕೈ ಕೆಳಗೆ ಕೆಲಸ ಮಾಡುತ್ತಾ ಜೀವನ ಸವೆಸುವುದರ ಬದಲು, ಕೆಲಸ ಕಲಿತ ಮೇಲೆ ತನ್ನದೇ ಆದ ಸ್ವಂತ ಉದ್ಯೋಗ ಪ್ರಾರಂಭಿಸಿ ತಮ್ಮ ಶ್ರಮದ ಪೂರ್ತಿ ಪ್ರತಿಫಲ ತಾವೇ ಪಡೆಯುವುದು ಒಳಿತಲ್ಲವೇ?

– ಎಡಿಕೇರಿ ಸುದರ್ಶನ್, ಬೆಂಗಳೂರು

10ನೇ ಪುಟದಿಂದ

ಎಷ್ಟು ಪ್ರಶಂಸಿಸಿದರು ಸಾಲದು.

ಈಗಿನ ಕಾಲದಲ್ಲಿ ಜನರು ಹೆಚ್ಚಾಗಿ ಆಸ್ಪತ್ರೆಗಳಿಗೆ ಹೋಗಿ ಲಕ್ಷಾಂತರ ರೂಪಾಯಿಗಳನ್ನು ಖರ್ಚು ಮಾಡಿ ಬರುತ್ತಾರೆ. ಮತ್ತು ಅಲ್ಲೆ ಬಹಳ ಕಾಯಿಲೆ ನಿಧಾನವಾಗಿ ವಾಸಿಯಾಗುವುದು. ಆದರೆ ಪೂವಯ್ಯನವರು ಯಾವುದೇ ಪ್ರತಿಫಲಾಪೇಕ್ಷೆಯಿಲ್ಲದೆ ತನಗೆ ತೃಪ್ತಿ ಸಿಗುವ ತನಕ ಚಿಕಿತ್ಸೆಯನ್ನು ನೀಡುವರು. ಮತ್ತು ಇವರ ಈ ನಾಟಿ ಔಷಧಿ ಹೆಚ್ಚಿನ ಪ್ರಭಾವವನ್ನು ಬೀರಿ ಬಹಳ ಬೇಗನೆ ಗುಣಮುಖ ಹೊಂದುವರು. ಎಂದು ಹೇಳಿದರು. ಈಗಿನ ಕಾಲದಲ್ಲಿ ಎಂ.ಬಿ.ಬಿ.ಎಸ್ ಓದಲು ಬಹಳ ಹಣ, ಬುದ್ಧಿ ಶಕ್ತಿಯನ್ನು ಖರ್ಚು ಮಾಡಿ ಕಷ್ಟ ಪಟ್ಟು ಕಲಿಯಬೇಕಾಗಿದೆ. ಹೀಗಿರುವಾಗ ನಮ್ಮ ಕರಮನೆ ಪೂವಯ್ಯನವರು ಬುದ್ಧಿಶಕ್ತಿಯಿಂದ ಔಷಧಿಯನ್ನು ತಯಾರು ಮಾಡಿ ಚಿಕಿತ್ಸೆ ನೀಡಿ ಜನರ ಮೆಚ್ಚುಗೆಗೆ ಪಾತ್ರರಾಗಿದ್ದಾರೆ. ಇದು ನಮ್ಮ ಗೌಡ ಜನಾಗದವರಿಗೆ ಬಹಳ ಹೆಮ್ಮೆಯ ಸಂಗತಿ. ಹಾಗೂ "ಬಡ ಜನರ ಆಪದ್‌ಬಂದು' ಎಂದು ಹೇಳಬಹುದು. ಇವರು ನಮ್ಮೊಂದಿಗೆ ಇವರ ಹಲವಾರು ಮಾಹಿತಿಯನ್ನು ನೀಡಿ ತಮ್ಮ ಸಾಧನೆಗಳನ್ನು ಹೇಳಿ ಸಂತೋಷವನ್ನು ವ್ಯಕ್ತ ಪಡಿಸಿದ್ದಾರೆ.

ಮರಗೋಡು ಗ್ರಾಮದ ಕೊಂಪುಳಿಯ ಕರುಂಬಯ್ಯನವರ 2 ನೇ ಪುತ್ರಿ ಬೋಜಮ್ಮಳನ್ನು ವಿವಾಹವಾಗಿ ಎರಡು ಗಂಡು ಮಕ್ಕಳು ಮತ್ತು ಒಂದು ಹೆಣ್ಣು ಮಕ್ಕಳ ತಂದೆಯಾಗಿರುವ ಶ್ರೀಯುತರಿಗೆ ಈಗ 61 ವರ್ಷಗಳು. ಪಿರಿಯಾಪಟ್ಟಣ ತಾಲ್ಲೂಕಿನ ಕೋಗಿಲವಾಡಿ ಗ್ರಾಮದವರಾದ ಶ್ರೀಯುತರು ಪ್ರಾತಃ ಕಾಲ ಎದ್ದು ಹೊಲ ಗದ್ದೆ ಕಡೆ ಹೋಗಿ ನೋಡಿಕೊಂಡು ಔಷಧಿಯನ್ನು ತರುವ, ಯಾವಾಗಲೂ ಹಸನ್ಮುಖಿಯಾಗಿರುವ ಮುಂದೆ ಇವರಿಗೆ ರಾಜ್ಯ ಪ್ರಶಸ್ತಿ, ಮತ್ತು ರಾಷ್ಟ್ರ ಪ್ರಶಸ್ತಿ ಲಭಿಸಲಿ ಎಂದು ಆಶಿಸುತ್ತಾ, ಕೊಡಗು ಸಂಗಾತಿಯ ಪರವಾಗಿ ನಮ್ಮ ಕುಲದೇವರಾದ ವೆಂಕಟರಮಣ ದೇವರು ಶೃಂಗೇರಿ ಶಾರದಾಂಬೆ ಸದಾ ಇವರಿಗೆ ಹಾಗೂ ಕುಟುಂಬಕ್ಕೆ ಆಯುಷ್ಯ, ಆರೋಗ್ಯ, ಸಂಪತ್ತನ್ನು ಕೊಟ್ಟು ಕಾಪಾಡಲಿ ಎಂದು ಹಾರೈಸುತ್ತೇನೆ. ನಮ್ಮ ಗೌಡ ಜನಾಂಗದಲ್ಲಿ ಇಂತಹ ಪ್ರತಿಭೆಗಳು ಇನ್ನಷ್ಟೂ ಬೆಳಕಿಗೆ ಬರಲಿ ಎಂದು ಸಹ ನನ್ನ ಹಾರೈಕೆ.

– ಆಜಡ್ಕ ರಾಣಿ ಬಾಲಕೃಷ್ಣ, ಕುಶಾಲನಗರ

---

2ನೇ ಪುಟದಿಂದ

ಕಟ್ರೆ- ಬೇಧಿ
ಮುರ್ಕಿ- ಗಟ್ಟಿಯಾಗಿ ಹಿಡಿ
ಕಾಲುಪುಳೆ - ಕಾಲುನೋವು
ನರಸೇದ್ಯೊತು - ನರ ಸೆಳೆತ
ಸೊಂಟ ಬಿದ್ದೊತು - ಸೊಂಟ ನೋವು
ಉಂಬೋದು - ಊಟ ಮಾಡು
ಉಂಬ ವಳಗೆ - ಊಟದ ಕೋಣೆ
ಕುರ್ಮಾಯಿ - ಒಂದು ತರದ ಕೊಂಬಿನ ಹುಳ
ಕರ್ಪುದು - ದನ ಬಾಯಲ್ಲಿ ಹುಲ್ಲು ಕಚ್ಚಿ ತಿನ್ನುವುದು.
ಹೆರ್ಕುದು - ಆಯ್ಕೆ ಮಾಡು,

- ಪಟ್ಟಡ ಪ್ರಭಾಕರ

---

ಹಣವಿಲ್ಲದೆ ಸಮಾಜ ಸೇವೆ ಮಾಡುವವನು "ಥೇಟ್ ನಾಲಾಯಕ್ಕು"

**ಪ್ರಕಟಣೆ**

## ಗೌಡ ಮತ್ತು ಬಂಧು ಮಿತ್ರರ ಕ್ಷೇಮಾಭಿವೃದ್ಧಿ ಸಂಘ, ಬೆಂಗಳೂರು.



ಸಂಘದ ಖಜಾಂಚಿಯವರಾದ ಜೈನೀರ ಬಿ. ಧನಂಜಯ ಇವರು ಕರ್ನಾಟಕ ರಾಜ್ಯ ಪಶುಸಂಗೋಪನ ಇಲಾಖೆಯ ಕೇಂದ್ರ ಕಛೇರಿ, ಬೆಂಗಳೂರಿನಲ್ಲಿ ಅಧೀಕ್ಷಕರಾಗಿ ಕೆಲಸ ಮಾಡುತ್ತಿದ್ದು, ಇತ್ತೀಚೆಗೆ ಅವರನ್ನು ಕರ್ನಾಟಕ ರಾಜ್ಯ ಪಶು ಸಂಗೋಪನ ಇಲಾಖೆಯ ನೌಕರರ ಸಂಘ (ರಿ), ವಿಶ್ವೇಶ್ವರಯ್ಯ ಚಿಕ್ಕ ಗೋಪುರ, ಬೆಂಗಳೂರು ಇದರ ಖಜಾಂಚಿಯವರನ್ನಾಗಿ ಆಯ್ಕೆ ಮಾಡಲಾಗಿದೆಯೆಂದು ತಿಳಿಸಲು ಹರ್ಷಿಸುತ್ತೇವೆ.

ಉಡುದೋಳಿರ ಎಲ್. ಸೋಮಪ್ಪ, ವಕೀಲರು ಮತ್ತು ನೋಟರಿ, ಕಾರ್ಯದರ್ಶಿ
ಮತ್ತು ಜೈನೀರ ಎಂ ಪುಂಡರೀಶ

---



ದಿ. ತೋಟಂಬೈಲು ರಾಘವೇಂದ್ರ (ಮೋಹನ್)
ಜನನ : 17-1-1955
ಮರಣ : 27-1-2001

## 1ನೇ ವರ್ಷದ ಪುಣ್ಯ ಸ್ಮರಣೆ

ನೀವು ಈ ಭೌತಿಕ ಪ್ರಪಂಚವನ್ನು ತ್ಯಜಿಸಿ ಒಂದು ವರುಷ ಕಳೆಯಿತು. ನಿಮ್ಮ ಪ್ರೀತಿ, ವಾತ್ಸಲ್ಯ, ಸ್ನೇಹಮಯ, ಸಹಬಾಳ್ವೆಯ ಚಿರನೆನಪು ಆಗಿಂದಾಂಗ್ಯೆ ಮರುಕಳಿಸುತ್ತಿದ್ದು, ನಿಮ್ಮ ಆತ್ಮಕ್ಕೆ ಚಿರಶಾಂತಿಯನ್ನು ಆ ಭಗವಂತನು ಅನುದಿನವು ನೀಡಲೆಂದು ಪ್ರಾರ್ಥಿಸುತ್ತಿರುವೆವು.

ಪತ್ನಿ : **ಪಾರ್ವತಿ (ಲಲ್ಲೂ)**
ಮಕ್ಕಳು : **ಆಶಿಕ, ಅಖಿಲ, ಉತ್ತಪ್ಪ,** ತಾಯಿ : **ಬೋಜಮ್ಮ**
ಹಾಗೂ **ಸಹೋದರ, ಸೋಹದರಿಯರು, ನಾದಿನಿಯರು** ಮತ್ತು **ಮಕ್ಕಳು**
ಕಟ್ಟೆ ಮಾಡು ಗ್ರಾಮ + ಅಂಚೆ, ಮಡಿಕೇರಿ ತಾಲ್ಲೂಕು, ☎ : 08272 / 31533

---



ಕೈಬೀಲಿರ ಬೋಜಮ್ಮ ತಿಮ್ಮಯ್ಯ
ಮರಣ 17-1-2000

## 2ನೇ ವರ್ಷದ ಪುಣ್ಯ ಸ್ಮರಣೆ

ನೀನು ದಿನಾಂಕ 7-1-2000ದಂದು ಇಹಲೋಕ ತ್ಯಜಿಸಿ ಇಂದಿಗೆ 2 ವರ್ಷ ಕಳೆದರು ಸದಾ ನನ್ನ ಮತ್ತು ಮಕ್ಕಳ ಸವಿನೆನಪಿನಲ್ಲಿದ್ದು ಸಕಲ ಕಾರ್ಯಗಳಿಗೂ ಆಶೀರ್ವಾದಿಸುತ್ತಿರುವ ಮತ್ತು ನಿನ್ನ ಸ್ಮರಣೆಯಲ್ಲಿರುವ,

ನಿನ್ನ ಪತಿ : **ಕೈಬೀಲಿರ ತಿಮ್ಮಯ್ಯ**
ಮಕ್ಕಳು : **ದಿನೇಶ್, ಮನೋಹರ್, ವಸಂತ**
ಸೊಸೆಯಂದಿರು : **ಕವಿತ, ತುಳಸಿ, ಕಲ್ಪನ**
ಮಗಳು : **ಕವಿತ,** ಮೊಮ್ಮಗ : **ಲಲಿತ್ ಬೋಪಣ್ಣ**
ಗುಡ್ಡೆ ಹೊಸೂರು ಅಂಚೆ ☎ : 08276 : 72784

---



ದಿ. ಬಡ್ಡನ ಉತ್ತಯ್ಯ
ಮರಣ : 3-11-2000

## ಸವಿನೆನಪು

ಕಗ್ಗೋಡ್ಲು ಗ್ರಾಮದ ನಮ್ಮ ಜನಾಂಗದಲ್ಲಿ ನೀವು ಮಾದರಿ ವ್ಯಕ್ತಿಯಾಗಿ ನಾವುಗಳು ನಿಮ್ಮನ್ನು ಅನುಕರಿಸುವಂತೆ ಮಾರ್ಗದರ್ಶಕರಾಗಿ ಹಳೇ ಅಜ್ಞಾನ ಕಾಲದಿಂದ ನವೀನ ಕಾಲದ ಸವಲತ್ತುಗಳನ್ನು ಹೇಗೆ ಪಡೆದುಕೊಂಡು ಬಳಸಿಕೊಳ್ಳಬಹುದೆಂಬ ವಿಚಾರಗಳನ್ನು ಪರಿಚಯಿಸಿದ ನಮ್ಮವರಲ್ಲಿ ನೀವು ಮೊದಲಿಗರೆಂದು ಜ್ಞಾಪಿಸಿಕೊಳ್ಳುವ ಹಾಗೂ ನಿಮ್ಮ ಆದರ್ಶ ಜೀವನ ನಮಗಳಿಗೆ ಮಾರ್ಗದರ್ಶನವಾಗಿದೆ.

ನಿಮ್ಮ ದಿವ್ಯಾತ್ಮಕ್ಕೆ ಭಗವಂತನು ಚಿರಶಾಂತಿ ಅನುದಿನವು ಕರುಣಿಸಲೆಂದು ಪ್ರಾರ್ಥಿಸುವ

ಪತ್ನಿ : ಕಮಲ, ಮಗಂದಿರು, ಮಗಳಂದಿರು,
**ಅಳಿಯಂದಿರು, ಸೊಸೆಯಂದಿರು ಹಾಗೂ ಅಪಾರ ಬಂಧುಗಳು, ಕಗ್ಗೋಡ್ಲು**

Reg. No. KA/SK/MYS-88 Registered : 10-01-96 TCI Kar. 09592

# ದಿನಾಂಕ 16-12-2001 ರಲ್ಲಿ ಮೈಸೂರಿನ ಹೋಟೆಲ್ ಸಿದ್ಧಾರ್ಥದಲ್ಲಿ ನಡೆದ ಗೌಡ ವಧು / ವರರ ಮುಖಾಮುಖಿ ಕಾರ್ಯಕ್ರಮದ ಓರೆನೋಟ



ಕಾರ್ಯಕ್ರಮ ಸುರುವಾಗುವ ಮುನ್ನ ವಿಚಾರ ಮಗ್ನರಾಗಿರುವ ಬೆಂಗಳೂರಿನ ಕೊಡಗು ಮತ್ತು ಗೌಡ ಸಮಾಜದ ಪದಾಧಿಕಾರಿಗಳು, ಕಾರ್ಯದರ್ಶಿ ಶ್ರೀ ನಂಗಾರು ನಿಂಗರಾಜು, ನೂಜಿ ದಿನಕರಗೌಡ, ತಿಮ್ಮಪ್ಪಗೌಡ, ತೆಕ್ಕಡೆ ಕಾವೇರಿಯಪ್ಪ ಹಾಗೂ ಇತರರು.



ಮೈಸೂರಿನಲ್ಲಿ ನೆಲೆಸಿರುವ ಜನಾಂಗದ ಹಿರಿಯರಿಂದ ಜ್ಯೋತಿ ಬೆಳಗಿಸುವುದು. ನೋಡುತ್ತಿರುವವರು ಕೊಡಗು ಮತ್ತು ದ. ಕ. ಗೌಡ ಸಮಾಜ ಬೆಂಗಳೂರಿನ ಅಧ್ಯಕ್ಷರಾದ ದಂಬೆಕೋಡಿ ಆನಂದ, ಡಾ. ಕಾವೇರಿ ಮನೆ ಬೋಜಪ್ಪ ಮತ್ತು ನೂಜಿ ದಿನಕರ ಗೌಡ.



ಬೆಂಗಳೂರಿನ ಕೊಡಗು ಮತ್ತು ದಕ್ಷಿಣ ಕನ್ನಡ ಗೌಡ ಮಹಿಳಾ ಒಕ್ಕೂಟದ ಅಧ್ಯಕ್ಷೆಯಾದ ಶ್ರೀಮತಿ ಕುಯ್ಯುಮುಡಿ ಸುಶೀಲಾ ಉಲ್ಲಾಸನವರಿಂದ ಸ್ವಾಗತಭಾಷಣ, ಸಹಕರಿಸಿ ನಿರೂಪಿಸುತ್ತಿರುವ ನಂಗಾರು ನಿಂಗರಾಜು ಮತ್ತು ಅಧ್ಯಕ್ಷರಾದ ಶ್ರೀ ದಂಬೆಕೋಡಿ ಆನಂದನವರು.



ಸಮಾರಂಭದಲ್ಲಿ ಜನಾಂಗದ ಹಿರಿಯರಾದ ಪೂಜಾರಿ ಮೊಣಪ್ಪ, ಕಾವೇರಿಮನೆ ಬೋಜಪ್ಪ ಹಾಗೂ ಇತರರು ವೀಕ್ಷಿಸುತ್ತಿರು ವುದು.



ಆಗಮಿಸಿದ ಬಂಧು ಬಾಂಧವರಿಂದ ಶಿಸ್ತಿನ ಉಟೋಪಚಾರದ ಒಂದು ಭಂಗಿ.



ಮುಖಾಮುಖಿ ಕಾರ್ಯಕ್ರಮದಲ್ಲಿ ಭಾಗವಹಿಸಿದ ಗೌಡ ವಧು / ವರರು.

**Kodagu Sangathi** Kannada Fortnightly Edited, Published, Printed & Owned by Pattada P. Sheelamani, No. 35, Savitha Nilaya, I Cross, 4th Block, **Jayalaxmipuram, Mysore - 12.** And **SANGATHI** Office ☎ : **0821/516771.** And Printed at Sri Guru Raghavendra Printers, 489, Devamba Agrahara, K. R. Mohalla, Mysore - 24. ☎ : 0821/431792.